# ಮುಂಜಾವು

ವಾರಪತ್ರಿಕೆ.

ಸಂಪಾದಕ: ಶಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್ ಎಸ್ — ೯೯

ಸಂಪುಟ ೧ ಸಂಚಿಕೆ ೨೫ ಕೊಪ್ಪ ೬-೨-೧೯೮೩ ಭಾನುವಾರ ಬೆಲೆ ೪೦ ಪೈಸೆ




### ಸ್ವಯಂ ಉದ್ಯೋಗ ತರಬೇತಿ ಯೋಜನೆ:

## ಸ್ಟೈಪಂಡ್ ಹಣದಲ್ಲಿ ಪಾಲು ಬೇಡಿಕೆ

(ವಿಶೇಷ ಪ್ರತಿನಿಧಿಯಿಂದ)

ಕೊಪ್ಪ: ಸರ್ಕಾರದ ಸ್ವಯಂ ಉದ್ಯೋಗ ತರಬೇತಿ ಯೋಜನೆಯನ್ವಯ ಗ್ರಾಮೀಣ ಯುವಜನರಿಗೆ ಸ್ಟೈಪೆಂಡ್ ನೀಡಿ ಮುದ್ರಣ, ರೇಡಿಯೋ ರಿಪೇರಿ, ಹೊಲಿಗೆ ಮುಂತಾದ ಕಸುಬುಗಳಲ್ಲಿ ತರಬೇತಿ ನೀಡಲಾಗುತ್ತಿದೆ. ಅಲ್ಲದೆ ತರಬೇತಿ ನೀಡುವವರಿಗೆ ಗೌರವ ಧನ ಹಾಗೂ ಪೂರಕ ವಸ್ತುಗಳಿಗಾಗಿ ಪ್ರತಿ ವಿದ್ಯಾರ್ಥಿಯ ಬಾಬ್ತು ತಿಂಗಳಿಗೆ ಗರಿಷ್ಠ ೨೫ ರೂ.ಗಳನ್ನು (ಸಾದಿಲ್ವಾರು) ನೀಡಲಾಗುತ್ತಿದೆ.

ಆದರೆ ತಾ.ಅ.ಮಂಡಳಿ ಕಚೇರಿಯಲ್ಲಿ ಈ ಹಣವನ್ನು ಬಟವಾಡೆ ಮಾಡುವ ಗುಮಾಸ್ತ ಅಭ್ಯರ್ಥಿಗಳಿಂದಲೂ ತರಬೇತಿ ನೀಡುವವರಿಂದಲೂ ಲಂಚ ವಸೂಲು ಮಾಡುತ್ತಿರುವುದಾಗಿಯೂ, ಸಾದಿಲ್ವಾರು ಹಣ ಪೂರ್ತಿ ತನಗೇ ಬರಬೇಕೆಂದು ಒತ್ತಾಯಿಸುತ್ತಿರುವುದಾಗಿಯೂ, ಅವರು ಸ್ಥಳಕ್ಕೇ ಬಂದು ಹಣ ಬಟವಾಡೆ ಮಾಡುವ ಮುತುವರ್ಜಿಗಾಗಿ ತಾವಾಗಿಯೇ ಸಂತೋಷದಿಂದ ನೀಡುವ ೨೫-೩೦ ರೂ.ಗಳು ಆತನಿಗೆ ಸಾಕಾಗುತ್ತಿಲ್ಲವೆಂತಲೂ ಹಲವಾರು ಜನ ದೂರಿದ್ದಾರೆ. ಇದರಿಂದಾಗಿ ಸ್ವಚ್ಛ ಕೈಯವರಾದ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಿಗೂ, ತಾ.ಅ.ಮಂಡಳಿಯ ಕೈಗಾರಿಕಾ ವಿಸ್ತರಣಾಧಿಕಾರಿಯವರಿಗೂ ಕೆಟ್ಟ ಹೆಸರು ಬರುವ ಸಾಧ್ಯತೆ ಇದೆ[illegible] ಹುದೆಂದೂ ಅವರುಗಳು ತಿಳಿಸಿದ್ದಾರೆ.

**ಬಿಡಿಓ ಪ್ರತಿಕ್ರಿಯೆ**

ಮೇಲಿನ ದೂರುಗಳ ಬಗ್ಗೆ ಕೊಪ್ಪ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು 'ಮುಂಜಾವು' ಪತ್ರಿಕೆಗೆ ಈ ಕೆಳಗಿನಂತೆ ಉತ್ತರಿಸಿದ್ದಾರೆ:

"ಈ ಕಛೇರಿಯಲ್ಲಿ ಸ್ವಯಂ ಉದ್ಯೋಗ ಯೋಜನೆಯ ವಿಷಯ ನಿರ್ವಾಹಕರು ತರಬೇತಿ ಪಡೆಯುತ್ತಿರುವ ಅಭ್ಯರ್ಥಿಗಳಿಂದ ಲಂಚ ಪಡೆಯುತಿದ್ದಾರೆಂದು ಆಪಾದಿಸಿ ಈ ಬಗ್ಗೆ ಪ್ರತಿಕ್ರಿಯೆಯನ್ನು ತಿಳಿಸಬೇಕೆಂದು ಕೋರಿದ್ದೀರಿ. ನನಗೆ ತಿಳಿದ ಮಟ್ಟಿಗೆ ಲಂಚ ಪಡೆಯುತ್ತಿದ್ದಾರೆಂಬುದು ಸುಳ್ಳು ಆಪಾದನೆ ಎಂದು ತಿಳಿದು ಬಂದಿದೆ. ಇನ್ನು ಮುಂದೆ ಈ ರೀತಿ ಆಪಾದನೆ ಆಗದಂತೆ ನೋಡಿ ಕೊಳ್ಳುತ್ತೇನೆ. ಹಾಗೂ ಸಂಬಂಧಪಟ್ಟ ಗುಮಾಸ್ತನನ್ನು ಸೂಕ್ತ ವಿಚಾರಣೆ ಮಾಡಿ ಕ್ರಮ ಕೈಗೊಳ್ಳುತ್ತೇನೆಂಬ ಭರವಸೆಯನ್ನು ತಮಗೆ ತಿಳಿಸ ಬಯಸುತ್ತೇನೆ."

**ಕ್ರಮ ಬಹಿರಂಗ ಪಡಿಸಲಿ**

ಈ ಉತ್ತರದ ನಂತರದ ನಾವು ಪುನಃ ಪರಿಶೀಲಿಸಿ ತನಿಖೆ ನಡೆಸಿದಾಗ ನಮಗೆ ಬಂದ ದೂರು ಸುಳ್ಳಲ್ಲವೆಂದು ಕಂಡುಬಂದಿದೆ.

(೬ನೇ ಪುಟಕ್ಕೆ)

## "ಲೆವಿ ಕೊಡಬೇಡಿ"

### —ರೈತರಿಗೆ ಕರೆ

ಕೊಪ್ಪ: ಭತ್ತಕ್ಕೆ ಲೆವಿ ಧಾರಣೆಗಿಂತ ಬಹಿರಂಗ ಮಾರುಕಟ್ಟೆಯಲ್ಲಿ ಹೆಚ್ಚು ಧಾರಣೆಯಿದೆ. ರೈತರು ಬಳಸುವ ರಾಸಾಯನಿಕ ಗೊಬ್ಬರ, ಕೀಟನಾಶಕ, ವ್ಯವಸಾಯ ಸಲಕರಣೆಗಳು ಈ ಯಾವುದರ ಬೆಲೆಯೂ ಕಮ್ಮಿಯಾಗಿಲ್ಲ. ಆದ್ದರಿಂದ ರೈತರು ಸರ್ಕಾರಕ್ಕೆ "ಲೆವಿ ಕೊಡಬಾರದು" ಎಂದು ಕೊಪ್ಪ ತಾ|| ರೈತಸಂಘದ ನೂತನ ಅಧ್ಯಕ್ಷ ಮಳಿಗೆ ಚಂದ್ರಶೇಖರ್ ರೈತರಿಗೆ ಕರೆ ನೀಡಿದ್ದಾರೆ.

**ನಿರ್ಬಂಧ ರದ್ದಾಗಲಿ**

ಆಹಾರ ಧಾನ್ಯಗಳ ಅಂತರ ಜಿಲ್ಲಾ ಸಾಗಾಣಿಕೆ ನಿರ್ಬಂಧಗಳನ್ನು ತೆಗೆದುಹಾಕಬೇಕೆಂದು ಅವರು ಸರ್ಕಾರವನ್ನು ಒತ್ತಾಯಿಸಿದ್ದಾರೆ.

ಕೊಪ್ಪ ತಾ||ನಲ್ಲಿ ನೀರಿನ ತೆರಿಗೆ ಕೊಡುವಂತೆ ತಗಾದೆ ಬಂದಿರುವ ರೈತರು ಕೂಡಲೇ ಪ್ರತ್ಯೇಕವಾಗಿ ಉಪವಿಭಾಗಾಧಿಕಾರಿಗಳಿಗೆ ಅಪೀಲು ಸಲ್ಲಿಸುವಂತೆಯೂ ಅವರು ರೈತರನ್ನು ಕೋರಿದ್ದಾರೆ.

### ಕುಷ್ಠರೋಗ ನಿವಾರಣಾ ದಿನ

ಕೊಪ್ಪ: ಜ. ೩೦ರಂದು ಇಲ್ಲಿನ ಪುರಸಭಾ ಭವನದಲ್ಲಿ ಆರೋಗ್ಯ ಇಲಾಖೆ ಆಶ್ರಯದಲ್ಲಿ 'ಕುಷ್ಠರೋಗ ನಿವಾರಣಾದಿನ'ವನ್ನು ಆಚರಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಜಿ. ವಿ. ಕಿರಗಿಯವರು "ಕುಷ್ಠರೋಗಿಗಳನ್ನು ಮಮತೆ, ವಿಶ್ವಾಸದಿಂದ ನೋಡಿರಿ. ಅವರಿಗೆ ಚಿಕಿತ್ಸೆ ಪಡೆಯಲು ಪ್ರೋತ್ಸಾಹ ನೀಡಿ" ಎಂದು ಕರೆ ನೀಡಿದರು.

ಆರೋಗ್ಯಾಧಿಕಾರಿ ಡಾ|| ರಂಗನಾಥನ್ ಮಾತನಾಡಿ ಕುಷ್ಠರೋಗವನ್ನು ಬೇಗ ಗುರ್ತಿಸಿ ಕ್ರಮಬದ್ಧ ಚಿಕಿತ್ಸೆ ಪಡೆದಿದ್ದಾದರೆ ಖಂಡಿತವಾಗಿ ಪೂರ್ಣ ಗುಣಪಡಿಸಬಹುದೆಂದರು. ಮುಖ್ಯ ಅತಿಥಿಯಾಗಿದ್ದ ಪುರಸಭಾ ಮುಖ್ಯಾಧಿಕಾರಿ ಆರ್. ಗುಂಡೂರಾವ್ "ಕುಷ್ಠರೋಗವನ್ನು ಪತ್ತೆ ಮಾಡಲು ಮನೆಗೆ ಬರುವ ಆರೋಗ್ಯ ಕಾರ್ಯಕರ್ತರಿಗೆ ಸಹಕಾರ ನೀಡಿ" ಎಂದು ಸಾರ್ವಜನಿಕರಲ್ಲಿ ಮನವಿ ಮಾಡಿಕೊಂಡರು.

ಇದೇ ಸಂದರ್ಭದಲ್ಲಿ ಕುಷ್ಠರೋಗಿಯೊಬ್ಬನನ್ನು ಜನರಿಗೆ ತೋರಿಸಿ ರೋಗದ ಬಗ್ಗೆ ವಿವರಿಸಲಾಯಿತು. ಕುಷ್ಠರೋಗಕ್ಕೆ ಸಂಬಂಧಪಟ್ಟ ವಸ್ತು ಪ್ರದರ್ಶನ ಹಾಗೂ ಚಿತ್ರಪತ್ರಗಳ ಪ್ರದರ್ಶನವೂ ಇತ್ತು.

ಡಾ|| ರಂಗನಾಥನ್ ಸ್ವಾಗತಿಸಿ ಕೆ. ಹೆಚ್. ನಾಗಭೂಷಣ ವಂದಿಸಿದರು.

### ಕೊಪ್ಪ ತಾ|| ರೈತ ಸಂಘದ ಅಧ್ಯಕ್ಷ ಮಳಿಗೆ ಚಂದ್ರಶೇಖರ್

ಕೊಪ್ಪ: ಶಾಸಕ ಹೆಚ್. ಜಿ. ಗೋವಿಂದಗೌಡರ ರಾಜೀನಾಮೆಯಿಂದ ತೆರವಾದ ಕೊಪ್ಪ ತಾ|| ರೈತ ಸಮಿತಿ ಅಧ್ಯಕ್ಷ ಸ್ಥಾನಕ್ಕೆ ಮಳಿಗೆ ಚಂದ್ರಶೇಖರ್ ಸರ್ವಾನುಮತದಿಂದ ಆಯ್ಕೆಯಾಗಿದ್ದಾರೆ. ಫೆ. ೫ರಂದು ಇಲ್ಲಿ ರೈತ ಸಮಿತಿಯ ಸರ್ವ ಸದಸ್ಯರ ಸಭೆ ಗೋವಿಂದ ಗೌಡರ ಅಧ್ಯಕ್ಷತೆಯಲ್ಲಿ ನಡೆಯಿತು.

## ಅತ್ಯಗತ್ಯ ಕೆಲಸಗಳಿಗೆ ಮಾತ್ರ ಬೇಡಿಕೆಸಲ್ಲಿಸಿ

### —ಗೋವಿಂದ ಗೌಡ

ಕುದ್ರೆಗುಂಡಿ: ಅತ್ಯಗತ್ಯವಾಗಿ ಆಗಬೇಕಾದ ಕೆಲಸಗಳಿಗೆ ಮಾತ್ರ ಬೇಡಿಕೆ ಸಲ್ಲಿಸಿ. ಅನಗತ್ಯ ಮತ್ತು ಅಸಂಬದ್ಧವಾದ ಬೇಡಿಕೆಗಳನ್ನು ಕೊಟ್ಟು ಸಮಯ ಹಾಳು ಮಾಡಬೇಡಿ ಎಂದು ಶಾಸಕ ಹೆಚ್. ಜಿ. ಗೋವಿಂದ ಗೌಡರು ಜನರಿಗೆ ಮನವಿ ಮಾಡಿದ್ದಾರೆ.

ಅವರು ಈಚೆಗೆ ಇಲ್ಲಿ ಗ್ರಾಮಸಭೆ [illegible] ಪಿ. ಜಿ. ಗುಜ್ಜಾರ್ ಅಧ್ಯಕ್ಷತೆಯಲ್ಲಿ ನಡೆದ ಅಭಿನಂದನಾ ಸಮಾರಂಭದಲ್ಲಿ ಮಾತನಾಡುತ್ತಿದ್ದರು.

ಹಿಂದುಳಿದ ಹಳ್ಳಿಗಳ ಸಮಸ್ಯೆಗಳನ್ನು ಅಧ್ಯಯನಮಾಡಿ ಅವುಗಳ ಪರಿಹಾರಕ್ಕೆ ಪ್ರಯತ್ನಿಸುವುದಾಗಿ ಭರವಸೆ ಕೊಟ್ಟ ಅವರು, ಹಾರ, ತುರಾಯಿ ಕೊಟ್ಟು ಹೊಗಳಿ ಶಾಸಕರನ್ನು ಅಡ್ಡದಾರಿಗೆ ಎಳೆಯದೆ ನ್ಯಾಯವಾಗಿ ಮಾತನಾಡುವ ರೀತಿ [illegible] ಎಂದೂ ಕರೆ ನೀಡಿದರು.

### ಬೇಗಾರು ಆಸ್ಪತ್ರೆಗೆ

## ಇಲಾಖಾ ವರಿಷ್ಠರ ಭೇಟಿ, ವಿಚಾರಣೆ

(ವರದಿ: ಎಸ್. [illegible]. ಶೃಂಗೇಶ್ವರ)

ಬೇಗಾರು: ಜ. ೨೯ರಂದು ಚಿಕ್ಕಮಗಳೂರಿನಿಂದ ಧಾವಿಸಿಬಂದ (!) ಜಿಲ್ಲಾ ಉಪ ಆರೋಗ್ಯಾಧಿಕಾರಿ ಡಾ|| ಎಂ. ಎಸ್. ಬೇವನೂರ್ ಊರಿನ ಮುಖಂಡರೊಡನೆ ಸುಮಾರು ಮೂರೂವರೆ ಗಂಟೆ ಕಾಲ ಚರ್ಚಿಸಿದ ನಂತರ, ಡಾ|| ಎ. ಜಿ. ಹೆಗ್ಡೆಯ ಮೇಲಿನ ಆರೋಪಗಳ ಬಗ್ಗೆ ಸರ್ಕಾರಕ್ಕೆ ವರದಿ ಮಾಡುವುದಾಗಿ ತಿಳಿಸಿದರು.

ಈ ಹಿಂದೆ ಡಾ|| ಹೆಗ್ಡೆಯಿಂದ ಅತ್ಯಾಚಾರಕ್ಕೊಳಗಾಗಿ ತುಂಬಿದ ಮಾಲತಿ ನದಿಯಲ್ಲಿ ಆತ್ಮಹತ್ಯೆ ಮಾಡಿಕೊಂಡ ಮಹಿಳೆಯ ಪ್ರಕರಣ, ಕಳೆದ ಆಗಸ್ಟ್ ಮೂರರಂದು ಆಸ್ಪತ್ರೆಗೆ ದಾಖಲಾಗಿದ್ದ ಉಳುಮುಡಿಯ ಮಹಿಳೆಯೊಬ್ಬರ ಮೇಲೆ ಅತ್ಯಾಚಾರಕ್ಕೆ ಯತ್ನಿಸಿದ್ದು, ಕಳೆದ ೩. ೩ರ ರಾತ್ರಿ ತುಂಬಿದ ಗರ್ಭಿಣಿಯ ಮೇಲೆ ಅತ್ಯಾಚಾರಕ್ಕೆ ಯತ್ನಿಸಿ ಅನಂತರ ಆಕೆ ಸಂದೇಹಾಸ್ಪದವಾಗಿ ಮರಣ ಹೊಂದಿದ್ದು — ಈ ಪ್ರಕರಣಗಳನ್ನು ಕುರಿತು ಡಾ|| ಬೇವನೂರ್ ಮೂಲಕ ಸರ್ಕಾರಕ್ಕೆ ಲಿಖಿತ ದೂರು ಸಲ್ಲಿಸಲಾಯಿತು.

**ನ್ಯಾಯ ಹೋರಾಟ ಸಮಿತಿ**

ಈ ಮಧ್ಯೆ ಎ. ರಾಮಪ್ಪ ಹೆಗ್ಡೆಯವರ ಅಧ್ಯಕ್ಷತೆಯಲ್ಲಿ ಹತ್ತು ಸದಸ್ಯರ ನ್ಯಾಯ ಹೋರಾಟ ಮತ್ತು ಶಾಂತಿ ಸಮಿತಿ ರಚಿತವಾಗಿದೆ.

**ಬದಲಿ ವ್ಯವಸ್ಥೆ**

ಡಾ|| ಹೆಗ್ಡೆ ರಜೆಯನ್ನೂ ಹಾಕದೆ ಗೈರು ಹಾಜರಾದ ನಂತರ ಊರವರ ಪ್ರತಿಭಟನೆಯಿಂದಾಗಿ ಮುಚ್ಚಲಾಗಿದ್ದ ಆಸ್ಪತ್ರೆಯನ್ನು ಡಾ|| ಬೇವನೂರ್ ಅವರು ಸಾಕ್ಷಿಗಳೆದುರು ಪುನಃ ತೆರೆಸಿದ್ದು, ಒಬ್ಬರು ಕಾಂಪೌಂಡರ್ ಅನ್ನು ನೇಮಿಸಲಾಗಿದೆ. ಹಾಗೂ ಹರಿಹರಪುರದ ವೈದ್ಯಾಧಿಕಾರಿ ಡಾ|| ಸಿದ್ದಪ್ಪ ವಾರಕ್ಕೆ ಒಂದು ದಿನ ಭೇಟಿ ಕೊಡುವ ಏರ್ಪಾಡಾಗಿದೆ.

### ಬಳಕೆದಾರರ ವೇದಿಕೆ

ಕೊಪ್ಪದ ಬಳಕೆದಾರರ ವೇದಿಕೆಯ ಕಾರ್ಯಕರ್ತರನ್ನು ಭೇಟಿಮಾಡಲು ಇಚ್ಛಿಸುವವರು ಪ್ರತಿ ಭಾನುವಾರ ಮಧ್ಯಾಹ್ನ ೩ರಿಂದ ೫ರವರೆಗೆ ಪುರಭವನದ ಎದುರಿನ ಹುಲ್ಲುಹಾಸಿನ ಮೇಲೆ ಭೇಟಿ ಮಾಡಬಹುದು.

ವೇದಿಕೆಗೆ ದೂರು [illegible] ವವರು ಬಳಕೆದಾರರ ವೇದಿಕೆ, [illegible] 'ಮುಂಜಾವು' ವಾರಪತ್ರಿಕೆ [illegible] ಈ ವಿಳಾಸಕ್ಕೆ ತಲುಪಿ[illegible]

## ದೇಶದ ಕೊರತೆ, ರೈತರ ಬಡತನ ನೀಗಲು
# ಬೇಸಿಗೆ ಬೆಳೆ ಬಹಳ ಉಪಯುಕ್ತ

ನಮ್ಮದು ಕೃಷಿ ಪ್ರಧಾನ ದೇಶ. ಕೃಷಿ ಅಭಿವೃದ್ಧಿಯೇ ದೇಶದ ಅಭಿವೃದ್ಧಿ. ಆದರೂ, ದೇಶದ ಶೇ. ೮೦ರಷ್ಟಿರುವ ರೈತರು ಆರ್ಥಿಕವಾಗಿ ಹಿಂದುಳಿದಿದ್ದಾರೆ. ಆದ್ದರಿಂದ ನಮ್ಮ ರೈತರು ಭೂಮಿಯನ್ನು ಮತ್ತು ಶ್ರಮವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡು, ಆಧುನಿಕ ಕೃಷಿ ವಿಧಾನಗಳನ್ನನುಸರಿಸಿ ಹೆಚ್ಚು ಹೆಚ್ಚು ಬೆಳೆ ಬೆಳೆಯಬೇಕಾಗಿರುವುದು ಅವಶ್ಯಕ. ಈ ದೃಷ್ಟಿಯಲ್ಲಿ ಮಲೆನಾಡಿಗೆ ಬೇಸಿಗೆ ಬೆಳೆ ತುಂಬಾ ಉಪಯುಕ್ತ.

ನಮ್ಮಲ್ಲಿ ಬೇಳೆಕಾಳುಗಳು ಹಾಗೂ ಎಣ್ಣೆ ಬೀಜಗಳ ಕೊರತೆ ಇರುವುದರಿಂದ ಅವುಗಳ ಉತ್ಪಾದನೆ ಹೆಚ್ಚಬೇಕಾಗಿದೆ. ಮಳೆಗಾಲದಲ್ಲಿ ಅವುಗಳನ್ನು ಬೆಳೆಯಲಾಗದಿರುವುದರಿಂದ ಬೇಸಿಗೆಯಲ್ಲಿ ಅವುಗಳನ್ನು ಬೆಳೆಯಬಹುದು. ನೀರಿನ ಕೊರತೆಯ ಕಾರಣಕ್ಕಾಗಿ ಗದ್ದೆಗಳನ್ನು ಹಾಳುಗೆಡಹುವ ಬದಲು ಕೊರತೆಯಿರುವ ಇಂತಹ ಧಾನ್ಯಗಳನ್ನು ಬೆಳೆಯುವುದರಿಂದ ಧಾನ್ಯದ ಕೊರತೆ ನೀಗುವುದರ ಜೊತೆಗೆ ನಮ್ಮ ಆರ್ಥಿಕ ಸ್ಥಿತಿಯನ್ನೂ ಉತ್ತಮ ಪಡಿಸಿಕೊಳ್ಳಬಹುದು.

ಈ ಬೇಸಿಗೆ ಬೆಳೆಗೆ ಖರ್ಚು ಕಡಿಮೆ. ಕೆಲಸವೂ ಕಡಿಮೆ. ಬೆಳೆಯುವುದು ಅತಿ ಸುಲಭವಾದ್ದರಿಂದ ರೈತರಿಗೆ ಇದು ಲಾಭದಾಯಕವಾಗಿರುವುದರಲ್ಲಿ ಸಂಶಯವಿಲ್ಲ. ಈ ಬೆಳೆಗಳನ್ನು ಬೆಳೆಯುವುದರಿಂದ ಮಣ್ಣಿನ ಫಲವತ್ತತೆ ಹೆಚ್ಚಿ, ಮಳೆಗಾಲದ ಬೆಳೆ ಉತ್ತಮವಾಗಿ ಬರುವುದೆಂದು ಸಂಶೋಧನೆಯಿಂದ ಗೊತ್ತಾಗಿದೆ.

ನಮ್ಮ ಮಲೆನಾಡಿನ ಭೂಮಿಯಲ್ಲಿ ಉದ್ದು, ಹೆಸರು, ಅಲಸಂದೆ, ಅವರೆ, ಹುರುಳಿ, ನೆಲಗಡಲೆ, ಸೂರ್ಯಕಾಂತಿ, ಎಳ್ಳು ಮುಂತಾದುವುಗಳನ್ನು ಬೆಳೆಯಬಹುದಾಗಿದ್ದು ಈ ಬೆಳೆಗಳಿಗೆ ಕೃಷಿ ಇಲಾಖೆ ರಿಯಾಯಿತಿ ದರದಲ್ಲಿ ಕೀಟನಾಶಕಗಳನ್ನು ಹಾಗೂ ಬೀಜಗಳನ್ನು ಒದಗಿಸುತ್ತದೆ. ದ್ವಿದಳ ಧಾನ್ಯಗಳಿಗೆ ಶೇ. ೫೦ ಹಾಗೂ ಎಣ್ಣೆ ಬೀಜಗಳಿಗೆ,ಮುಖ್ಯವಾಗಿ ನೆಲಗಡಲೆಗೆ, ಶೇ.೫೦ ರಿಯಾಯಿತಿ ದರದಲ್ಲಿ ಕೀಟನಾಶಕ ಔಷಧಿ ಒದಗಿಸುವುದಲ್ಲದೆ ಇವುಗಳ ಬೀಜಗಳನ್ನು ಶೇ. ೫೦ ರಿಯಾಯಿತಿ ದರದಲ್ಲಿ ಒದಗಿಸುತ್ತಿದೆ. ಅಲ್ಲದೆ ಭೂಮಿಯಲ್ಲಿ ಸಾರಜನಕವನ್ನು ಹೆಚ್ಚಿಸುವ ಸಲುವಾಗಿ ಅಪ್ ಸೆಣಬು ಬೆಳೆಗೂ ಶೇ. ೫೦ ರಿಯಾಯಿತಿ ದರದಲ್ಲಿ ಬೀಜಗಳನ್ನು ಕೊಡಲಾಗುತ್ತದೆ.

ಬೆಳೆದ ಈ ಬೆಳೆಗಳನ್ನು ತಾ.ವ್ಯ.ಮಾ. ಸ.ಸಂಘವು ಕೊಳ್ಳುವುದರಿಂದ ಮಾರುಕಟ್ಟೆಯ ತೊಂದರೆಯೂ ಇಲ್ಲ. ಈ ಎಲ್ಲ ದೃಷ್ಟಿಯಿಂದಲೂ ಬೇಸಿಗೆ ಬೆಳೆ ಉಪಯುಕ್ತ ಹಾಗೂ ಲಾಭದಾಯಕವಾದ್ದರಿಂದ ರೈತರು ಈ ಬಗ್ಗೆ ಗಮನ ಹರಿಸಬೇಕಾಗಿದೆ.

## ಹೊಸ ಶಾಸಕರಿಗೊಂದು
# ಹಳೇ ಸಲಹೆ

ಮಾನ್ಯರೆ,

ನಮ್ಮ ಕ್ಷೇತ್ರದ ಮಾಜಿ ಶಾಸಕರಿಗೆ 'ಮುಂಜಾವು' ('ದೀವಟಿಗೆ') ಓದುಗರೊಬ್ಬರು ಒಂದು ಸಲಹೆ ಕೊಟ್ಟಿದ್ದರು. ಆದರೆ ಅದು ಆಗ ಕಾರ್ಯರೂಪಕ್ಕೆ ಬರಲಿಲ್ಲ. ಆದೇ ಸಲಹೆಯನ್ನು ನಾನೀಗ ಪುನಃ ನಮ್ಮ ಹೊಸ ಶಾಸಕರಿಗೆ ನೀಡುತ್ತಿದ್ದೇನೆ. ಹಾಗೂ ಅದನ್ನು ಖಂಡಿತ ಕಾರ್ಯರೂಪಕ್ಕೆ ತರುವಂತೆ ಒತ್ತಾಯಿಸುತ್ತಿದ್ದೇನೆ.

ಸಲಹೆ ಇದು:

ಸರ್ಕಾರ ಎಂಥ ದಕ್ಷ ಆಡಳಿತ ಕೊಡುತ್ತೇನೆಂದು ಹೇಳಿಕೊಂಡರೂ ಸರ್ಕಾರದ ಇಲಾಖೆಗಳಿಗೆ ಹತ್ತಿರುವ ಜಡ್ಡು ಅಷ್ಟು ಸುಲಭವಾಗಿ ಹರಿಯುವಂಥದಲ್ಲ. ಹೀಗಿರುವಾಗ ಹಳ್ಳಿಗರ ಸರ್ಕಾರಿ ಕೆಲಸಗಳಿಗೆ ಯಾವಾಗಲೂ ತೊಂದರೆ ತಪ್ಪಿದ್ದಲ್ಲ. ತಮ್ಮ ಸರ್ಕಾರಿ ಕೆಲಸಗಳಲ್ಲಿ ತೊಂದರೆಯಾದಲ್ಲಿ ಸ್ಥಳೀಯ ಕಾರ್ಯಕರ್ತರ ಸಹಕಾರ ಪಡೆಯಬೇಕೆಂದು ಮಾನ್ಯ ಗೋವಿಂದ ಗೌಡರು ಸರಿಯಾದ ಸಲಹೆಯನ್ನೇ ಮಾಡಿದ್ದಾರಾದರೂ ('ಮುಂಜಾವು' ವರದಿ: ೨೩-೧-೮೩) ಎಷ್ಟೋ ವೇಳೆ ಶಾಸಕರ ಹತ್ತಿರ ಹಳ್ಳಿಗರಿಗೆ ಅಹವಾಲು, ಕೋರಿಕೆ ಇದ್ದೇ ಇರುತ್ತವೆ.

ಆದ್ದರಿಂದ ತಿಂಗಳಿಗೊಮ್ಮೆಯಾದೂ ಶಾಸಕರು ಕ್ಷೇತ್ರದ ಜನರಿಗೆ ಭೇಟಿಯ ಅವಕಾಶರ ಕಲ್ಪಿಸಲೇ ಬೇಕಾಗುತ್ತದೆ. ಅದರಂತೆ, ಮೂರೂ ತಾಲ್ಲೂಕು ಕೇಂದ್ರಗಳಲ್ಲಿ ತಮ್ಮ ಖಾಯಂ ಕಚೇರಿಯೊಂದನ್ನು ತೆರೆದು (ಅಥವಾ ಆಯಾ ಪ್ರವಾಸಿ ಮಂದಿರಗಳಲ್ಲಿ), ತಾವು ಅಲ್ಲಿ ಜನರನ್ನು ಭೇಟಿಮಾಡುವ ದಿನವನ್ನು ಪ್ರತಿ ತಿಂಗಳೂ (ಸಾಕಷ್ಟು ಮುಂಚಿತವಾಗಿ) ಪ್ರಕಟಿಸಬೇಕು. ಮೂರು ತಾಲ್ಲೂಕುಗಳಲ್ಲೂ, ತಾ॥ ಕೇಂದ್ರದಿಂದ ಅತೀ ದೂರದಲ್ಲಿ, ವಾಹನ ಸೌಕರ್ಯವೂ ಸರಿಯಾಗಿಲ್ಲದ ಅನೇಕ ಹಳ್ಳಿಗಳಿವೆ. ಅಲ್ಲಿನವರಿಗೂ ಅನುಕೂಲವಾಗುವಂತೆ ಅದೇ ದಿನ ಎರಡು ಅಥವಾ ಮೂರು ಗಂಟೆ ಕಾಲ ಅಂಥ ಮೂಲೆಯ ಪ್ರದೇಶಗಳಿಗೆ ಕೇಂದ್ರವಾದ ಯಾವುದಾದರೂ ಒಂದು ಸ್ಥಳದಲ್ಲಿ (ಉ॥ ಮುಂಜಾನೆಕಾಳೆಹೊನ್ನೂರು, ಬಸರಿಕಟ್ಟೆ, ನೆಮ್ಮಾರುಗಳು ಇ... (೩ನೇ ಪುಟಕ್ಕೆ)

...ಸುವಂತೆ ನೋಡಿಕೊ...

...ಯಿಂದ ಓಡುವ ಬಸ್ ಸಿಕ್ಕ...

# ಸ್ವಂತ ಕಾಲಮೇಲೆ ನಿಲ್ಲಲೇಬೇಕೆಂದಿದ್ದರೆ....

ತಾ॥ ೧೬-೧-೮೩ರ ನಿಮ್ಮ ಪತ್ರಿಕೆಯಲ್ಲಿ "ಹಾಲು ಸಂಗ್ರಹಣೆ ಕೇಂದ್ರ ತೆರೆಯಲು ಮನವಿ" ಎಂಬ ವರದಿಗೆ ನನ್ನ ಪ್ರತಿಕ್ರಿಯೆ ಇದು.

ಕಡು ಬಡತನದಲ್ಲಿ ಜೀವನ ನಡೆಸುತ್ತಿದ್ದು, ಸರ್ಕಾರದ ಸಹಾಯ-ಸಾಲಗಳ ಆಸರೆಯಿಂದ ತಮ್ಮ ಜೀವನ ಮಟ್ಟ ಸುಧಾರಿಸಿಕೊಳ್ಳಲು ಯತ್ನಿಸಿದ ದುರ್ಬಲ ವರ್ಗಗಳ ಜನರನ್ನು. ಸರಿಯಾದ ವ್ಯವಸ್ಥೆಯಿಲ್ಲದೆ ಹೀಗೆ ನಡು ನೀರಲ್ಲಿ ಕೈಬಿಟ್ಟಿರುವುದು ಸರಿಯಲ್ಲ.

ಆದರೆ ಸರ್ಕಾರದವರು ಕೈಬಿಟ್ಟರೆಂದು ಜನರು ಶಾಪ ಹಾಕುತ್ತ ಕೈಕಟ್ಟಿ ಕೂರುವುದನ್ನೂ ನಾನು ಒಪ್ಪುವುದಿಲ್ಲ. ಅವರಿಗೆ ನಿಜವಾಗಿಯೂ ತಮ್ಮ ಪರಿಸ್ಥಿತಿ ಸುಧಾರಿಸಿಕೊಳ್ಳಬೇಕೆಂದಿದ್ದರೆ ಒಂದಲ್ಲೊಂದು ದಾರಿಯನ್ನು ಅವರೇ ಕಂಡುಕೊಳ್ಳುವುದು ಸಾಧ್ಯವಿದೆ. ಒಬ್ಬೊಬ್ಬರೇ ಈ ಸಮಸ್ಯೆ ಬಗೆಹರಿಸಿಕೊಳ್ಳಲು ಆಗದಿದ್ದರೆ ಸಮಸ್ಯೆಗೊಳಗಾದ ಎಲ್ಲರೂ ಒಟ್ಟು ಸೇರಿಯಾದರೂ ಪರಿಹಾರ ಹುಡುಕಲು ಸಾಧ್ಯ.

ಆದರೆ ನಾನು ಕಂಡಂತೆ, ಈ ಭಾಗದ ಜನ ಬಹಳ ನಿರುತ್ಸಾಹಿಗಳು. ಏನ ಸಲಹೆ ಮಾಡಿದರೂ, "ನಮಗೆ ಅದು ಸಾಧ್ಯವಾದೀತೆ? ಸಾಧ್ಯವಾಗಬೇಕಾದರೆ ಏನು ಮಾಡಬೇಕು?" ಎಂದು ಯೋಚಿಸುವ ಬದಲು ಒಮ್ಮೆಗೇ "ಅದೆಲ್ಲ ಎಲ್ಲಿ ಆಗ್ತದೆ?" ಎಂದೇ ಯೋಚಿಸಲು ಇಷ್ಟಪಡುತ್ತಾರೆ. ಅಂಥವರು, 'ಎಲ್ಲರೂ ಒಟ್ಟು ಸೇರಿ....' ಎಂದೊಡನೆ, "ಎಲ್ಲರೂ ಎಲ್ಲಿ ಸೇರುತ್ತಾರೆ? ಸೇರಿದವರನ್ನೇ ಬೇಕಾದರೆ ಒಡೆಯುತ್ತಾರೆ...." ಮುಂತಾಗಿ, ಜಾರಿಕೊಳ್ಳಲು ನೋಡಿಯಾರು. ಎಲ್ಲರೂ ಒಗ್ಗಟ್ಟಿಲ್ಲದ ಈ ಸಮಸ್ಯೆ ಇಲ್ಲಿ ಮಾತ್ರ ಅಲ್ಲ. ಎಲ್ಲ ಕಡೆಯೂ ಇರುವಂಥದು. ಆದರೆ, ಸಿಕ್ಕ ಸ್ವಲ್ಪ ಅವಕಾಶವನ್ನಾದರೂ ಉಪಯೋಗಿಸಿಕೊಂಡು ಏಳಿಗೆ ಹೊಂದಲೇ ಬೇಕೆಂಬ ಮನಸ್ಸಿದ್ದರೆ ಎಂಥ ತೊಂದರೆಯಿದ್ದರೂ ನಿವಾರಿಸಿಕೊಳ್ಳಲೇ ಬೇಕು. ಒಗ್ಗಟ್ಟಾಗಲೇಬೇಕು.

ಹಾಗೆ ನಾವು ನಮ್ಮ ಜಡತ್ವವನ್ನು ಬಿಟ್ಟು, ಸಿಕ್ಕಿದ ಅವಕಾಶಗಳನ್ನು ಅಭಿವೃದ್ಧಿ ಪಡಿಸಿಕೊಳ್ಳಲು ಪ್ರಯತ್ನಿಸದೆ ಎಲ್ಲವನ್ನೂ ಸರ್ಕಾರವೇ ಮಾಡಬೇಕು ಎಂದು ಹೇಳುವುದಾದರೆ, ಸರ್ಕಾರ ಏನು ಕೊಟ್ಟರೂ ನಾವು ಏಳಿಗೆ ಹೊಂದುವುದಿಲ್ಲ. ಏಕೆಂದರೆ, ಕಟ್ಟಿ ಕೊಟ್ಟ ಬುತ್ತಿಯನ್ನು ಬಿಚ್ಚಿ ಉಣ್ಣುತ್ತಾ ಕೂತರೆ ಒಂದೇ ಹೊತ್ತು ಊಟವಾಗುತ್ತದೆ. ಅದೇ ಬುತ್ತಿಯನ್ನು ಹಸಿವಾದಾಗ ಉಂಡು, ದುಡಿದು ಇನ್ನೊಂದುಮತ್ತೊಂದ ಬುತ್ತಿ ಸಂಪಾದಿಸಿದರೆ ಮಾತ್ರ ಮುಂದುವರಿಯುವುದು ಸಾಧ್ಯ.

ಇದು ಎಂಥದೇ ಪರಿಸ್ಥಿತಿಯಲ್ಲೂ, ಎಂಥವರಿಗೂ ಸಾಧ್ಯವಿದೆ. ತಮ್ಮ ಕಾಲ ಮೇಲೆ ನಿಲ್ಲಬೇಕು, ಹೆಚ್ಚು ದಿನ ಬೇರೆಯವರ ಅಡಿಯಾಳಾಗಿರಬಾರದು ಎಂಬ ಛಲ ಬೇಕು ಅಷ್ಟೆ. ಯಾವುದೇ ಅನುಕೂಲತೆಗಳಿಲ್ಲದ ಬಡವರಿಗೆ ಹೆಚ್ಚು ಕಷ್ಟವಾಗಬಹುದು, ಹೆಚ್ಚು ಅಡ್ಡಿಗಳು ಬರಬಹುದು, ಏಳಿಗೆ ನಿಧಾನವಾಗಬಹುದು, ಅಷ್ಟೆ.

—'ಸೀಮಾ', ಕೊಪ್ಪ.

## ಆಕರ್ಷಿಸಿದ
# ಮಕ್ಕಳ ಸಂಜೆ

ತುಂಬಾ ಸುಂದರವೂ, ರಂಜನೀಯವೂ ಆಗಿದ್ದ 'ಮಕ್ಕಳ ಸಂಜೆ' ಕಾರ್ಯಕ್ರಮವು ಮೊನ್ನೆ ಕೊಪ್ಪದಲ್ಲಿ ನಡೆದ ಗಣರಾಜ್ಯೋತ್ಸವಕ್ಕೆ ಕಿರೀಟವಿಟ್ಟಂತಿತ್ತು. ಅಂದು ನಮ್ಮ ಕೊಪ್ಪದ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯ ವಾರ್ಷಿಕೋತ್ಸವ, ಕಾರ್ಯಕ್ರಮಕ್ಕೆ ಬಂದಿದ್ದವರೆಲ್ಲರ ಮನಸ್ಸಿನಲ್ಲಿ ಚಿರವಾಗಿ ಉಳಿಯುವಂಥದ್ದು.

ಅಂದು ಪುಟ್ಟ ಮಕ್ಕಳ ಕಾರ್ಯಕ್ರಮಗಳೆಲ್ಲವೂ ರಂಜನೀಯವಾಗಿದ್ದವು; ಅಪಾರ ಸಮಯ ಸ್ಫೂರ್ತಿ, ಧೈರ್ಯಗಳು ಮೆಚ್ಚುವಂತಿದ್ದವು; ನಿರುದ್ದೇಶಿತವಾದ ಅಪಾರ ಕೆಲವು ತಪ್ಪುಗಳು ಸಹ—ಉದಾಹರಣೆಗೆ ಕನ್ನಡ ನೃತ್ಯದ ನಡುವೆ ಹೊಡೆದ ಸಲ್ಯೂಟ್—ತುಂಬಾ ತಮಾಷೆಯಾಗಿದ್ದವು. ನಾಟಕಗಳ ಮಟ್ಟ ಉತ್ತಮವಾಗಿತ್ತು. ಅಭಿಮನ್ಯುವಿನ ಪಾತ್ರದಲ್ಲಿ ಬೇಬಿ ಪ್ರಮೀಳ ವೃತ್ತಿ ನಟರ ಹಾಗೆ ಪ್ರೇಕ್ಷಕರ ಮನಸ್ಸನ್ನೇ ಸೂರೆ ಹೊಡೆದಳು. ಮಾರ್ಗದರ್ಶನ, ಪ್ರೋತ್ಸಾಹಗಳಿದ್ದರೆ ಬೆಳೆಯುವ ಭರವಸೆಯನ್ನು ಮಾ|ಶಿವರಾಮ ಪ್ರಸಾದ್ ಮೂಡಿಸಿದ. ಕಾರ್ಯಕ್ರಮ (ಕೊಂಚ ಉದ್ದವಾದರೂ ಸಹ) ಮಕ್ಕಳ ಸ್ವಚ್ಛಂದ, ಚೇತೋಹಾರಿ, ಸಹಜ ಪ್ರತಿಭೆಯ ಸುಂದರ ಅಭಿವ್ಯಕ್ತಿಯಾಗಿತ್ತು. ಮಕ್ಕಳು ಮುಗ್ಧರಿರಬಹುದು. ಆದರೆ ಅವರು ತಮ್ಮ ಕೆಲಸವನ್ನು ಸಮರ್ಥವಾಗಿ, ಅರ್ಥಪೂರ್ಣವಾಗಿ ನಿರ್ವಹಿಸಿದರು. ಉರಿಯುವ ಬಿಸಿಲಿನಲ್ಲಿ ನಡೆಯುವ, ಬೋರು ಹೊಡೆಸುವ ಮೀಟಿಂಗ್‌ಗಿಂತ ಕೊರೆಯುವ ಚಳಿಯಲ್ಲಿ ರಾತ್ರಿ ೧೨-೩೦ರ ವರೆಗೂ ನಡೆದ ಮಕ್ಕಳ ಈ ಕಾರ್ಯಕ್ರಮ ನೋಡುವುದು ಹೆಚ್ಚು ಉಪಯುಕ್ತವೆನ್ನಬಹುದು.

ಈ ಕಾರ್ಯಕ್ರಮದ ಯಶಸ್ಸು ಮಕ್ಕಳನ್ನು ತಿದ್ದಿ ರೂಪಿಸಿದ ಅಧ್ಯಾಪಕರಿಗೆ ಸಲ್ಲಬೇಕು. ಪ್ರೈಮರಿ ಶಾಲೆಯ ಮಟ್ಟದಲ್ಲಿ ಹಲವು ಕೈಗಳು ಸೇರಿ ಮಾಡಿದ ಇಂಥ ಒಂದು ಕೆಲಸ, ಸುಮಾರು ಒಂದು ತಿಂಗಳ ಹಿಂದೆ ನಡೆದ ಸರ್ಕಾರಿ ಜೂನಿಯರ್ ಕಾಲೇಜಿನ ಕಾರ್ಯಕ್ರಮವನ್ನು ನಾಚಿಸುವಂತಿತ್ತು.

ಸಾರ್ವಜನಿಕರ ಎದುರಿಗೆ ಬಹುಮಾನ ವಿತರಿಸುವಾಗ, ಅವುಗಳನ್ನು ಸೂಕ್ತ ಕಾಗದಗಳಿಂದ ಮುಚ್ಚಿದ್ದರೆ ಚೆನ್ನಾಗಿರುತ್ತಿತ್ತು.

—ಗಂಗಾಧರಮೂರ್ತಿ.

# ಕೊಪ್ಪ ಮುಖ್ಯರಸ್ತೆಯ ದುಃಸ್ವಪ್ನ!

**ಕೊಪ್ಪ: ಹೊಳೆಯ ಹರಿವಿನಂತೆ ಸಾಗುವ, ಸಾಕಷ್ಟು ಇಕ್ಕಟ್ಟಾದ, 'ಫುಟ್‌ಪಥ' ಇಲ್ಲದ, ಜನ ನಿಬಿಡವಾದ ಇಲ್ಲಿನ ಮುಖ್ಯ ರಸ್ತೆಯಲ್ಲಿ ಡೀಸೆಲ್ ರಾಕ್ಷಸಗಳು ಘೀಳಿಡುತ್ತ ವೀರಾವೇಶದಿಂದ ನುಗ್ಗುವುದು ಕಂಡಾಗ ಜೀವ ತಲ್ಲಣಿಸುತ್ತದೆ. ಇದೇ ರಸ್ತೆಯಲ್ಲಿ ದಿನವೂ ಸಾವಿರಾರು ಮೊಗ್ಗುಗಳು-ಹೂವುಗಳು, ಬಣ್ಣ ಬಣ್ಣದ ಹಕ್ಕಿ ಮರಿಗಳು ಓಡಾಡುತ್ತವಲ್ಲಪ್ಪ!**

ಕಳೆದ ವರ್ಷ ಬಸ್ಸೊಂದು ಮೊಗ್ಗೊಂದನ್ನು ಹೊಸಕಿ ಹಾಕಿದಾಗ ಕಲಕಿಹೋದ ಇಡೀ ಊರ ಜನರ ಅಂತಃಕರಣದ ಪ್ರತೀಕವಾಗಿ ಇಲ್ಲಿನ 'ಅಂಕುರ ಬಳಗ'ದವರು ತೀವ್ರ ಶ್ರಮವಹಿಸಿ ಜನಾಭಿಪ್ರಾಯ ಸಂಗ್ರಹಿಸಿ ಅಧಿಕಾರಿಗಳ ಗಮನಕ್ಕೆ ತಂದರು. ಊರೊಳಗೆ ವಾಹನಗಳ ಓಡಾಟಕ್ಕೆ ತೀವ್ರ

(೩ನೇ ಪುಟಕ್ಕೆ)

# ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ, ಕೊಪ್ಪ ವಿಭಾಗ, ಕೊಪ್ಪ.



ಸಂಖ್ಯೆ ಇಎಂಟಿ. ವಿವಿದ. ವಿವ. 78/82–83 ದಿನಾಂಕ 18–1–1983

## ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ:

ದೇಶದ ಅರಣ್ಯ ಸಂಪತ್ತು ಕಾಡಿನ ಬೆಂಕಿಯಿಂದಾಗಿ ಪ್ರತಿವರ್ಷ ನಾಶವಾಗುತ್ತಿದೆ. ಕಾಡಿನ ಬೆಂಕಿಯಿಂದ ಲಕ್ಷೋಪಲಕ್ಷ ಸಣ್ಣ–ಪುಟ್ಟ ಗಿಡ–ಮರಗಳು ಸಾಯುವವಲ್ಲದೆ, ಎಷ್ಟೋ ಬಲಿತ ಮರಗಳಿಗೂ ಅನಾಹುತವಾಗುತ್ತದೆ. ಉಪಯೋಗಕ್ಕೆ ಬರುವ ಒಣಗಿ ಬಿದ್ದಿರುವ ಹಾಗೂ ಒಣಗಿ ನಿಂತಿರುವ ಮರಗಳು ಸಂಪೂರ್ಣ ಸುಟ್ಟುಹೋಗುತ್ತವೆ. ಕಾಡಿನ ಕಿರಿಯ ಉತ್ಪತ್ತಿಗಳಾದ ಹಲವಾರು ಬಗೆಯ ಬೀಜಗಳು, ಸೊಪ್ಪು, ಜೇನು ಇತ್ಯಾದಿಗಳು ಕೂಡ ನಾಶಕ್ಕೊಳಗಾಗುತ್ತವೆ. ಕಾಡಿನ ಪಕ್ಷಿ ಪ್ರಾಣಿಗಳಿಗೂ ತೊಂದರೆಯಾಗಿ ಅವುಗಳ ವಂಶವೂ ಕ್ಷೀಣಿಸುತ್ತದೆ. ಅಂತಿಮವಾಗಿ ಕಾಡಿನ ನಾಶಕ್ಕೆ ನಾಂದಿಯಾಗಿ ಪ್ರಕೃತಿಯ ವಿಕೋಪಗಳಾದ ಅನಾವೃಷ್ಟಿ, ಅತಿವೃಷ್ಟಿಗಳಿಗೆ ಎಡೆಮಾಡಿಕೊಡುತ್ತದೆ.

ಬೆಂಕಿಯಿಂದ ಕಾಡಿಗೆ ಆಗುವ ಈ ಅನಾಹುತಗಳನ್ನು ತಡೆಗಟ್ಟಲು ಅರಣ್ಯ ಇಲಾಖೆಯಿಂದ ಹಲವಾರು ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ. ಉದಾಹರಣೆಗೆ, 1. ರಸ್ತೆಯ ಅಕ್ಕ–ಪಕ್ಕದಿಂದ ಬೆಂಕಿ ಕಾಡಿಗೆ, ಪ್ಲಾಂಟೇಶನ್‌ಗಳಿಗೆ ಹರಡದಂತೆ ಬೆಂಕಿ ತಡೆದಾರಿಗಳನ್ನು ಎಲ್ಲಾ ಮುಖ್ಯ ರಸ್ತೆಗಳ ಅಕ್ಕಪಕ್ಕದಲ್ಲೂ ರಚಿಸಲಾಗಿದೆ. 2. ಬೇಸಿಗೆ ಸಮಯದಲ್ಲಿ ಹಾಲಿ ಅರಣ್ಯ ಸಿಬ್ಬಂದಿಗೆ ಸಹಾಯಕವಾಗಿ ಕೆಲಸ ಮಾಡಲು ಹಲವಾರು ಬೆಂಕಿ ಕಾವಲುಗಾರರನ್ನು ಅಲ್ಲಲ್ಲಿ ನೇಮಿಸಲಾಗಿದೆ.

ಆದರೆ ಈ ಕ್ರಮಗಳಿಂದಲೇ ಯಶಸ್ವಿಯಾಗಿ ಕಾಡಿನ ಬೆಂಕಿಯನ್ನು ಸಂಪೂರ್ಣವಾಗಿ ತಡೆಗಟ್ಟಲು ಸಾಧ್ಯವಾಗುವುದಿಲ್ಲ. ಸಮರ್ಪಕವಾಗಿ ಕಾಡಿನ ಬೆಂಕಿಯನ್ನು ತಡೆಗಟ್ಟಲು ಸಾರ್ವಜನಿಕರ ಸಹಾಯ ತುಂಬಾ ಅತ್ಯಗತ್ಯ. ಸಾರ್ವಜನಿಕರು ಈ ವಿಷಯದಲ್ಲಿ ನೀಡಬೇಕಾದ ನೆರವುಗಳೇನೆಂದರೆ:

**1. ತಮ್ಮ ಸುತ್ತ ಮುತ್ತಲ ಜನರಿಗೆ ಬೆಂಕಿಯಿಂದ ಆಗುವ ಅನಾಹುತಗಳ ಬಗೆಗೆ ಅರಿವು ಮೂಡಿಸುವುದು.**

**2. ಯಾವುದೇ ಕಾರಣದಿಂದಲೂ ಕಾಡಿಗೆ ಬೆಂಕಿಯನ್ನು ಹಚ್ಚಬಾರದು.**

**3. ಹಳ್ಳಿಗಾಡು ಪ್ರದೇಶದಲ್ಲಿ ರೈತರು ತಮ್ಮ ಹೊಲಕ್ಕೆ ಅಥವಾ ಮನೆಗಳ ಸುತ್ತಮುತ್ತ ಬೆಂಕಿಯನ್ನು ಹಚ್ಚುವ ಮೊದಲು ಅರಣ್ಯಾಧಿಕಾರಿಗಳಿಗೆ ತಿಳಿಸತಕ್ಕದ್ದು.**

**4. ರಾತ್ರಿ ವೇಳೆಯಲ್ಲಿ ಹಳ್ಳಿಗಾಡು ಪ್ರದೇಶದ ಜನರು ಪೊಂದಿಯನ್ನು ಹಚ್ಚಿಕೊಂಡು ಕಾಡಿನೊಳಗಿನ ದಾರಿಯಲ್ಲಿ ಸಂಚರಿಸ ಬಾರದು.**

**5. ಕಾಡಿಗೆ ಅಥವಾ ಪ್ಲಾಂಟೇಶನ್‌ಗಳಿಗೆ ಬೆಂಕಿ ಬಿದ್ದಿರುವುದು ಕಂಡು ಬಂದಲ್ಲಿ ಕೂಡಲೆ ಬೆಂಕಿಯನ್ನು ಆರಿಸಲು ಕ್ರಮ ತೆಗೆದುಕೊಳ್ಳತಕ್ಕದ್ದು. ಹಾಗೂ ಹತ್ತಿರದ ಅರಣ್ಯ ಸಿಬ್ಬಂದಿಗಳಿಗೆ ಸುದ್ದಿಯನ್ನು ತಿಳಿಸಿ, ಅಂತಹ ಕಾಡಿನ ಬೆಂಕಿಯನ್ನು ಸಂಪೂರ್ಣವಾಗಿ ತಡೆಗಟ್ಟಲು ಅರಣ್ಯ ಸಿಬ್ಬಂದಿಗಳಿಗೆ ನೆರವಾಗಬೇಕು.**

**6. ಕಾಡಿನೊಳಗೆ ಅರಣ್ಯ ಇಲಾಖೆಗೆ ಸಂಬಂಧಿಸಿದ ಕೆಲಸಗಳನ್ನು ನಿರ್ವಹಿಸುವಾಗ ಸಂಬಂಧಿಸಿದ ಗುತ್ತಿಗೆದಾರರು, ಕೆಲಸಗಾರರು ಯಾವುದೇ ರೀತಿಯಿಂದಲೂ ಕಾಡಿಗೆ ಬೆಂಕಿ ಹರಡದಂತೆ ನೋಡಿಕೊಳ್ಳಬೇಕು.**

**7. ಲೋಕೋಪಯೋಗಿ ಇಲಾಖೆಯ ಕೆಲಸಗಾರರು ಹಾಗೂ ಗುತ್ತಿಗೆದಾರರು ಕೂಡ ರಸ್ತೆಯ ಅಕ್ಕಪಕ್ಕದಿಂದ ಬೆಂಕಿ ಕಾಡಿಗೆ ಹರಡದಂತೆ ನೋಡಿಕೊಳ್ಳಬೇಕು.**

ಯಾರೇ ಆಗಲಿ ಕಾಡಿಗೆ ಉದ್ದೇಶಪೂರ್ವಕವಾಗಿ ಅಥವಾ ತಿಳಿಯದೆಯೇ ಬೆಂಕಿಯನ್ನು ಹಚ್ಚಿದಲ್ಲಿ ಅಂತಹ ವ್ಯಕ್ತಿಗಳು ಕರ್ನಾಟಕ ಅರಣ್ಯ ಇಲಾಖೆ ನಿಯಮಾವಳಿಗಳ 24ನೆಯ ಕಲಮಿನ ಮೇರೆಗೆ 500 ರೂ. ದಂಡ ಹಾಗೂ 6 ತಿಂಗಳ ಕಾರಾಗೃಹ ವಾಸಕ್ಕೆ ಒಳಗಾಗುತ್ತಾರೆ. ಮತ್ತು ನಾಶಕ್ಕೊಳಗಾದ ಅರಣ್ಯ ಉತ್ಪತ್ತಿಯ ಬೆಲೆಯನ್ನು ಅವರಿಂದ ವಸೂಲು ಮಾಡಲಾಗುವುದು.

ತಪ್ಪಿತಸ್ಥರಿಗೆ ಯಾವುದೇ ರೀತಿಯ ಕ್ಷಮೆ ಕೊಡಲಾಗುವುದಿಲ್ಲ ಎಂದು ತಿಳಿಯಿರಿ.

## "ಕಾಡನ್ನು ಉಳಿಸಿ, ಬೆಂಕಿಯ ಅನಾಹುತದಿಂದ ರಕ್ಷಿಸಲು ಸಹಕರಿಸಿರಿ"

ಕೆ. ಸುಂದರ ನಾಯ್ಕ, ಭಾ.ಅ.ಸೇ.
ಉಪ ಅರಣ್ಯ ಸಂರಕ್ಷಣಾಧಿಕಾರಿ
ಕೊಪ್ಪ, ಚಿಕ್ಕಮಗಳೂರು ಜಿಲ್ಲೆ.

## ಕಾಡು, ಗುಡ್ಡಗಳಲ್ಲಿ ಎಸ್ಟೇಟ್ ಚಟುವಟಿಕೆ:

# ಊರಕಡೆ ಹುಲಿಗಳ ವಲಸೆ

ಆಸಗೋಡು, ಮೇಲು ಬೆಳ್ಳಿ, ದೇವರ ಮನೆ ಸುತ್ತಮುತ್ತ ಕಳೆದ ಒಂದು ತಿಂಗಳಿಂದ ಹುಲಿಯ ಹಾವಳಿ ವಿಪರೀತವಾಗಿದ್ದು ಈಗಾಗಲೇ ೨೦ಕ್ಕೂ ಹೆಚ್ಚು ಜಾನುವಾರುಗಳು ಅವಕ್ಕೆ ಆಹಾರವಾಗಿವೆಯೆಂದು ಹೇಳಲಾಗಿದೆ. ಹಳ್ಳಿ ದಾರಿಗಳಲ್ಲಿ ಶಾಲಾ ಮಕ್ಕಳೂ ಜನರೂ ತಿರುಗಾಡಲು ಭಯಪಡುವ ಸ್ಥಿತಿ ಉಂಟಾಗಿದೆ. ಮೂರು ಮರಿಗಳೂ ಸೇರಿ ಒಟ್ಟಿಗೆ ೫ ಹುಲಿಗಳು ಬಂದಿವೆಯೆಂದು ಗ್ರಾಮಸ್ಥರ ಹೇಳಿಕೆ. ಈ ಬಗ್ಗೆ ಅರಣ್ಯ ಇಲಾಖೆಯವರು ಜನರಿಗೆ ರಕ್ಷಣೆ ಕೊಡಲು ಮುಂದಾಗಬೇಕೆಂದು ಜನತೆ ಕೋರಿದ್ದಾರೆ. ಜಾನುವಾರುಗಳನ್ನು ಕಳೆದು ಕೊಂಡವರು ಪರಿಹಾರಕ್ಕಾಗಿ ಇಲಾಖೆಗೆ ಅರ್ಜಿ ಹಾಕುತ್ತಿದ್ದು, ಬರುವ ಅಲ್ಪ ಸ್ವಲ್ಪ ಪರಿಹಾರವನ್ನಾದರೂ ಯಾವುದೇ ಲಂಚ, ತಿದ್ದಿ ಆತಂಕಗಳಿಲ್ಲದೆ ಶೀಘ್ರವಾಗಿ ಕೊಡಿಸಬೇಕೆಂಬುದು ಇಲಾಖೆಗೆ ಊರವರ ಮನವಿ.

ಕೊಪ್ಪ ಘಾಟಿಯ ಕೋಟೆಗುಡ್ಡದ ಅಜುಬಾಜಿನಲ್ಲಿ ಕಾಫಿ ತೋಟಗಳ ಚಟುವಟಿಕೆ ಜಾಸ್ತಿಯಾದಂತೆ, ಈವರೆಗೂ ಅಲ್ಲಿ ವಾಸಿಸುತ್ತಿದ್ದ ಈ ಹುಲಿಗಳು ಈಗ ಊರುಗಳತ್ತ ದಾಟಿವೆ ಎಂಬುದು ಗ್ರಾಮಸ್ಥರ ಊಹೆ.

---

### ತಾಳ ಮದ್ದಲೆ

ಹರಿಹರಪುರ: ಜ.೨೮ರಂದು ಡಾ|| ಯು. ಪಿ.ಆರ್. ಭಟ್ಟರ ಮನೆಯಲ್ಲಿ ನಡೆದ ದೇವತಾ ಕಾರ್ಯವೊಂದರ ಪ್ರಯುಕ್ತ ಗಮಕಿ ಸೂರ್ಲಿ ಕೃಷ್ಣ ದೇವರಯ್ಯನವರಿಂದ ಭಾರತ ವಾಚನ ಹಾಗೂ ಮಲೆನಾಡು ಯಕ್ಷಗಾನ ಸಂಸ್ಥೆಯವರಿಂದ ತಾಳ ಮದ್ದಲೆ ನಡೆದವು.

### ಕೊಪ್ಪ ಗ್ರಾಮ ಪಂಚಾಯ್ತಿ ಗಣರಾಜ್ಯ ದಿನದ ಕಾರ್ಯಕ್ರಮ

ಕೊಪ್ಪ: ಇಲ್ಲಿನ ಗ್ರಾಮ ಪಂಚಾಯ್ತಿ ಹಾಗೂ ಹರಂದೂರಿನ ಭಾಗ್ಯೋದಯ ಯುವಕ ಸಂಘಗಳ ಆಶ್ರಯದಲ್ಲಿ ಗಣರಾಜ್ಯ ದಿನದಂದು ಶೇ. ೧೮ರ ಮೀಸಲಾತಿ ನಿಧಿಯಿಂದ ಸ್ಟೀಲ್ ತಟ್ಟೆಗಳ ವಿತರಣೆಯನ್ನು ಮೈಸೂರು ಬ್ಯಾಂಕ್ ಮ್ಯಾನೇಜರ್ ಎಂ.ಎಸ್.ಆಚಾರ್ಯ ನೆರವೇರಿಸಿದರು. ತಹಸೀಲ್ದಾರ್ ಹೆಚ್.ಎಂ.ನಾಗಪ್ಪ ಉಚಿತ ನಿವೇಶನಗಳ ಸಾಗುವಳಿ ಚೀಟಿ ಹಂಚಿದರು. ತಾ.ಅ.ಮಂ.ಅಧ್ಯಕ್ಷ ಬಿ.ಜಿ.ಚಿದಂಬರ್ ಮುಖ್ಯ ಅತಿಥಿಗಳಾಗಿದ್ದರು. ಕೊಪ್ಪ ಪಂಚಾಯ್ತಿ ಅಧ್ಯಕ್ಷ ಜಿ.ಡಿ.ಪರಮೇಶ್ವರ ಅಧ್ಯಕ್ಷತೆ ವಹಿಸಿದ್ದರು.

### ಸ್ಟೈಪಂಡ್ ಹಣದಲ್ಲಿ ಪಾಲು ಬೇಡಿಕೆ

(೧ನೇ ಪುಟದಿಂದ)

ಇಲ್ಲವೆ ಕಳೆದ ತಿಂಗಳು ಮೊಲಿಗೆ ತರಬೇತಿ ಕೇಂದ್ರ ವೊಂದರಲ್ಲಿ ಇದೇ ರೀತಿ ಮಾಮೂಲಿಗೆ ಒತ್ತಾಯಿಸಿದಾಗ ಸಾದಿಲ್ವಾರು ಹಣ ಕೊಡುವ ಬದಲು ಅವರು ಪ್ರತಿ ಅಭ್ಯರ್ಥಿಯಿಂದಲೂ (ಅವರಿಗೆ ಬರುವ ೫೦ ರೂ.ಗಳಲ್ಲೇ!) ಸಂಗ್ರಹಿಸಿ ಕೊಟ್ಟಿರೆಂದೂ, ಇದರಿಂದ ಅಭ್ಯರ್ಥಿಗಳು ಸಿಟ್ಟಿಗೆದ್ದು ತಾ.ಅ.ಮಂ. ಅಧ್ಯಕ್ಷರವರೆಗೂ ದೂರು ಹೋಗಿವೆಯೆಂದೂ ತಿಳಿದು ಬಂದಿದೆ.

ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ಭರವಸೆ ಕೊಟ್ಟಂತೆ ತಾವು ತೆಗೆದುಕೊಂಡ ಕ್ರಮವನ್ನು ಸಾರ್ವಜನಿಕರ ಅವಗಾಹನೆಗಾಗಿ ಬಹಿರಂಗ ಪಡಿಸಬೇಕಾಗಿದೆ.

### ಪಾಲಕ – ಪೋಷಕರ ಸಭೆ

(ವರದಿ: ಹೆಚ್.ಎಸ್.ಶಿವಶಂಕರ ರಾವ್)

ಅಡ್ಡಗದ್ದೆ: ತೊರೆಹಡ್ಲು ಸರ್ಕಾರಿ ಪ್ರೌಢ ಶಾಲಾ ವಿದ್ಯಾರ್ಥಿಗಳ ಪಾಲಕ–ಪೋಷಕರ ಸಭೆಯನ್ನು ಜ. ೨೮ರಂದು ಶಾಲಾ ಸಮಿತಿ ಅಧ್ಯಕ್ಷರೂ, ಶೃಂಗೇರಿ ತಾ|| ಅ|| ಮಂ|| ಉಪಾಧ್ಯಾಕ್ಷರೂ ಆದ ಕೆ. ಎಂ. ಮರಿಯಪ್ಪ ಗೌಡರ ಅಧ್ಯಕ್ಷತೆಯಲ್ಲಿ ಅಧ್ಯಾಪಕ ವರ್ಗದವರು ಏರ್ಪಡಿಸಿದ್ದರು. ಮುಖ್ಯ ಅತಿಥಿಗಳಾದ ಸಹಾಯಕ ವಿದ್ಯಾಧಿಕಾರಿ ಟಿ.ಭೀಮಪ್ಪ, ಶಾಲಾ ಮುಖ್ಯೋಪಾಧ್ಯಾಯ ಟಿ.ಜಯರಾಂ, ಬಿ.ಎ.ಧರ್ಮಪ್ಪ ಹಾಗೂ ಅಧ್ಯಕ್ಷರು ಸಭೆಯನ್ನುದ್ದೇಶಿಸಿ ಮಾತನಾಡಿದರು.

### ಸ್ಟೀಲ್ ತಟ್ಟೆ, ಸಾಗುವಳಿ ಚೀಟಿ ವಿತರಣೆ

ಅದ್ದಡ: ಕೊಪ್ಪ ಗ್ರಾಮ ಪಂಚಾಯ್ತಿ ಅಧ್ಯಕ್ಷ ಜಿ.ಡಿ.ಪರಮೇಶ್ವರ ಅವರ ಅಧ್ಯಕ್ಷತೆಯಲ್ಲಿ ಜ.೨೬ರಂದು ಇಲ್ಲಿ ನಡೆದ ಸಮಾರಂಭದಲ್ಲಿ ಈ ಗ್ರಾಮದ ಹರಿಜನ ಗಿರಿಜನರಿಗೆ ಸ್ಟೀಲ್ ತಟ್ಟೆಗಳನ್ನು ಎಸ್.ಆರ್.ಮಂಜುನಾಥ್ ಅವರೂ, ಇತರರಿಗೆ ಉಚಿತ ನಿವೇಶನಗಳ ಸಾಗುವಳಿ ಚೀಟಿಗಳನ್ನು ಎಸ್.ಪಿ.ಚಂದ್ರಶೇಖರ್ ಅವರೂ ಹಂಚಿದರು. ಸಿ.ವಿ.ವೆಂಕಟೇಶ್ ಮತ್ತು ಬಿ. ಕೆ. ಬಾಬಣ್ಣ ನಾಯ್ಕ ಮುಖ್ಯ ಅತಿಥಿಗಳಾಗಿದ್ದರು. ಎಸ್. ಪಿ. ಶ್ರೀನಿವಾಸ್ ಸ್ವಾಗತಿಸಿ, ಹೆಚ್.ಸಿ.ದೂಮಪ್ಪ ವಂದಿಸಿದರು.

### ಫ್ಲಾಶ್: ನೂತನ ಕಾರ್ಯಕಾರಿಣಿ

ಶೃಂಗೇರಿ: ಇಲ್ಲಿನ ಫ್ಲಾಶ್ ಅಸೋಸಿಯೇಶನ್ನಿನ ಹೊಸ ಕಾರ್ಯಕಾರಿ ಮಂಡಳಿ ಹೀಗಿದೆ: ಹೆಚ್.ಎಸ್.ಸಿದ್ದಪ್ಪ (ಅಧ್ಯಕ್ಷ), ಕೆ.ಸತ್ಯನಾರಾಯಣ ಶೆಟ್ಟಿ (ಕಾರ್ಯದರ್ಶಿ), ಎಸ್.ಕೆ.ಸತೀಶ್ (ಸಹ ಕಾರ್ಯದರ್ಶಿ), ಬಿ. ವಿ. ಶಂಕರಪ್ಪ (ಖಜಾಂಚಿ), ಎಸ್. ಬಿ. ಮುದ್ದಲಿಂಗೇಗೌಡ (ಸಲಹೆಗಾರರು), ಮತ್ತು ಇತರ ೬ ಜನರ ಕಾರ್ಯಕಾರಿ ಸಮಿತಿ.

### ಮಹಿಳಾ ಸಮಾಜದ ಸಭೆ

ಸೋಮಲಾಪುರ: ಇಲ್ಲಿನ ಭವಾನಿ ಮಹಿಳಾ ಸಮಾಜದ ಮೊದಲ ಸಭೆ ಬಾಲ ವಿಕಾಸ ಯೋಜನಾಧಿಕಾರಿ ಕೆ.ಟಿ.ಬೋರಯ್ಯನವರ ಅಧ್ಯಕ್ಷತೆಯಲ್ಲಿ ಫೆ. ೩ರಂದು ನಡೆಯಿತು. ಸಮಾಜದ ಗೌ| ಕಾರ್ಯದರ್ಶಿನಿ ಗಿಂಜಾಂಬ ಸ್ವಾಗತಿಸಿದರು. ವೈ.ಎಸ್.ಸುಬ್ಬರಾವ್, ಎಸ್.ರಾಮಭಟ್, ಸಮಾಜದ ಅಧ್ಯಕ್ಷೆ ಎಸ್.ಎಂ.ಲೀಲಾವತಿ ಮಾತನಾಡಿದರು. ಬಾಲ ವಿಕಾಸ ಯೋಜನೆ ಮೇಲ್ವಿಚಾರಕಿ ಶ್ರೀಮತಿ ಲೂಸಿ ಡಿಸೋಜ ಸಮಾಜದ ಚಟುವಟಿಕೆ, ಸರ್ಕಾರದಿಂದಾಗುವ ಸಹಾಯ, ಅದನ್ನು ಪಡೆದುಕೊಳ್ಳುವ ಕ್ರಮಗಳನ್ನು ವಿವರಿಸಿದರು. ಸಮಾಜದ ಅಧ್ಯಕ್ಷೆ ವಂದಿಸಿದರು.

### ಶೃಂಗೇರಿ ಗುರುಗಳ ಆಗಮನ

ಶೃಂಗೇರಿ: ಇಲ್ಲಿನ ಶಂಕರಾಚಾರ್ಯ ಮಠದ ಹಿರಿಯ ಮತ್ತು ಕಿರಿಯ ಗುರುಗಳು ತಮ್ಮ ಭಾರತ ಪ್ರವಾಸ ಮುಗಿಸಿ ಜ. ೨೮ರ ಸಂಜೆ ಊರಿಗೆ ಹಿಂದಿರುಗಿದರು.

ಪುರಸಭಾಧ್ಯಕ್ಷ ಎಸ್.ಎಸ್.ಚಂದ್ರಶೇಖರ್‌ರವರ ಅಧ್ಯಕ್ಷತೆಯ ಸ್ವಾಗತ ಸಮಿತಿಯ ನೇತೃತ್ವದಲ್ಲಿ ಊರವರು ಗುರುಗಳನ್ನು ಪೂರ್ಣಕುಂಭ ಸ್ವಾಗತದೊಂದಿಗೆ ಮೆರವಣಿಗೆಯಲ್ಲಿ ಮಠಕ್ಕೆ ಕರೆದೊಯ್ದರು.

ಪ್ರತಿಕೂಲ ಹವೆಯ ಪ್ರವಾಸದ ಕಾರಣ ಹಿರಿಯ ಗುರುಗಳ ಆರೋಗ್ಯ ಕ್ಷೀಣಿಸಿರುವುದು ಕಂಡುಬಂತು.

### ನ.ರಾ.ಪುರ ಕಿರಿಯ ಕಾಲೇಜಿನಲ್ಲಿ ರಾಜ್ಯ ಮಟ್ಟದ ವಿವಿಧ ಸ್ಪರ್ಧೆಗಳು

ನ.ರಾ.ಪುರ: ಇಲ್ಲಿನ ಸರ್ಕಾರಿ ಕಿರಿಯ ಕಾಲೇಜಿನಲ್ಲಿ ರಾಜ್ಯ ಮಟ್ಟದ ಅಂತರ ಪ್ರೌಢಶಾಲಾ/ಕಿರಿಯ ಕಾಲೇಜು ಚರ್ಚಾ ಸ್ಪರ್ಧೆ, ಭಾವಗೀತೆ–ಜನಪದ ಗೀತೆ ಸ್ಪರ್ಧೆಗಳು ಫೆ. ೯ರಂದು ನಡೆಯಲಿವೆ. ಇನ್ನೂ ಪ್ರವೇಶ ಪತ್ರಗಳನ್ನು ಕಳಿಸಿಲ್ಲದವರು ಸ್ಪರ್ಧೆಗೆ ಒಂದು ಗಂಟೆ ಮುಂಚಿತವಾಗಿಯಾದರೂ ಬಂದು ಸ್ಪರ್ಧಿಸಬಹುದಾಗಿದೆ.

ಫೆ. ೧೦ರಂದು ಕಾಲೇಜಿನ ವಾರ್ಷಿಕೋತ್ಸವ ಹಾಗೂ ಶಾಲಾ ವಾರ್ಷಿಕ ಸಂಚಿಕೆ 'ಜ್ಯೋತಿ' ಬಿಡುಗಡೆ ಸಮಾರಂಭ ನಡೆಯುತ್ತದೆ.

### ಭೂ ಅಭಿವೃದ್ಧಿ ಬ್ಯಾಂಕಿನ ಮಹಾಸಭೆ

ಕೊಪ್ಪ: ಇಲ್ಲಿನ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕಿನ ೧೯೮೦ – ೮೧ ಮತ್ತು ೮೧–೮೨ನೇ ಸಾಲಿನ ಮಹಾಸಭೆ ಜ. ೨೬ರಂದು ಅಧ್ಯಕ್ಷ ಯು. ಎಸ್. ಶಿವಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು.

ಸಭೆಯನ್ನುದ್ದೇಶಿಸಿ ಶಾಸಕ ಹೆಚ್.ಜಿ. ಗೋವಿಂದ ಗೌಡ, ಎ. ಬಿ. ವಾಸಪ್ಪ, ಚಿದಂಬರ್, ಮೊಹಮದ್ ಸಾದಿಕ್, ತಹಸೀಲ್ದಾರ್, ಬಿಡಿಒ ಅವರುಗಳು ಮಾತನಾಡಿದರು.

ಜೆ.ಆರ್.ಕೆ.ರಾಮಭಟ್ ಸ್ವಾಗತಿಸಿದರು. ಬ್ಯಾಂಕಿನ ೨ ವರ್ಷಗಳ ಆಡಳಿತ ವರದಿ ಮಂಡಿಸಿದ ಕಾರ್ಯದರ್ಶಿ ಎಂ. ಎಸ್. ಕೃಷ್ಣಪ್ಪ ವಂದನಾರ್ಪಣೆ ಮಾಡಿದರು.

### ಜನ ಮನ ತಣಿಸಿ, ಸ್ಥಳೀಯ ಪ್ರತಿಭೆಗೆ ಇಂಬುಗೊಟ್ಟ

## ಪುರಂದರ, ತ್ಯಾಗರಾಜರ ಆರಾಧನೋತ್ಸವ

ಸೂರಳಿ: ಫೆ. ೨ ಮತ್ತು ೩ರಂದು ಇಲ್ಲಿನ ಆಂಜನೇಯ ದೇವಸ್ಥಾನದಲ್ಲಿ ನಡೆದ ಪುರಂದರ ದಾಸರ ಮತ್ತು ತ್ಯಾಗರಾಜರ ಆರಾಧನಾ ಸಂಗೀತೋತ್ಸವ ಈ ಸುತ್ತಲ ಹತ್ತಾರು ಹಳ್ಳಿಗಳ ಜನರಿಗೆ ರಂಜನೆ ಒದಗಿಸಿದ್ದಲ್ಲದೆ ಹಲವಾರು ಸ್ಥಳೀಯ ಕಿರಿಯ ಕಲಾವಿದರಿಗೆ ತಮ್ಮ ಪ್ರತಿಭೆ ಬೆಳಕಿಗೊಡ್ಡುವ ಹಾಗೂ ಅನುಭವಿ ಕಲಾವಿದರಿಂದ ನೋಡಿ ಕಲಿಯುವ ಉತ್ತಮ ಅವಕಾಶವನ್ನು ಒದಗಿಸಿತು.

ದ.ಕ.ಜಿಲ್ಲೆಯ ಕಾಂಚನದ ಕಲಾ ಶಾಲೆಯಲ್ಲಿ ಪ್ರತಿ ವರ್ಷ ನಡೆಯುವ ಆರಾಧನೆಯ ಮಾದರಿಯಲ್ಲಿ ಉತ್ಸವ ಏರ್ಪಡಿಸಲಾಗಿತ್ತು. ಅಲ್ಲಿ ವಿದ್ಯಾರ್ಥಿಯಾಗಿದ್ದು ಈಗ ಸುಮಾರು ೧೦–೧೨ ವರ್ಷಗಳಿಂದ ಇಲ್ಲಿ ನೆಲೆಸಿ ಈ ಭಾಗದಲ್ಲಿ ನೂರಾರು ಕಲಾವಿದರನ್ನು ತರಬೇತು ಮಾಡಿರುವ ಮಧೂರು ಪಿ.ಬಾಲಸುಬ್ರಮಣ್ಯಂ ಅವರು ಈ ಪ್ರಶಾಂತ ಪರಿಸರದಲ್ಲಿ ಈ ಕಾರ್ಯಕ್ರಮ ಯೋಜಿಸಿದ್ದವರು. ಇದಕ್ಕಾಗಿ ಒಂದು ಸಮಿತಿ ರಚಿತವಾಗಿದ್ದು, ಈ ಕಾರ್ಯಕ್ರಮವನ್ನು ಇನ್ನಷ್ಟು ಉತ್ತಮ ಪಡಿಸುತ್ತಾ, ಪ್ರತಿ ವರ್ಷ ನಡೆಸಲು ಸಮಿತಿ ಉದ್ದೇಶಿಸಿದೆ. ಇದಕ್ಕೆ ಕಲಾವಿದರ, ಕಲಾಭಿಮಾನಿಗಳ ಪ್ರೋತ್ಸಾಹ ಇದೇ ರೀತಿ ಮುಂದುವರಿಯಲೆಂದು ಸಮಿತಿ ಆಶಿಸಿದೆ.

ಸ್ಥಳೀಯ ಮತ್ತು ಹೊರಗಿನ ಒಟ್ಟು ಸುಮಾರು ೮೦ ಕಲಾವಿದರು ಈ ಉತ್ಸವದಲ್ಲಿ ಭಾಗವಹಿಸಿದ್ದರು.

---

### ಎಚ್ಚರಿಕೆ

ಕೊಪ್ಪ ಮೇಲಿನ ಪೇಟೆಯಲ್ಲಿರುವ ನಮ್ಮ ಪಿತ್ರಾರ್ಜಿತ ಮನೆ ನಂ. (3) 541 (ಶ್ರೀ ಮಾಧವ ಕಿಣಿ ಇರುವ ಮನೆ) ಮತ್ತು ಅದರ ಲಗ್ತು ಇರುವ 2 ಸೈಟುಗಳನ್ನು ನಮ್ಮ ಅಣ್ಣನವರಾದ ಲೇ|| ಚೌಡಯ್ಯನವರ ಪತ್ನಿ ಶ್ರೀಮತಿ ವೆಂಕಮ್ಮನವರ ದತ್ತು ಪುತ್ರ ಸತ್ಯನಾರಾಯಣ ಎಂಬವರು ಮಾರಾಟ ಮಾಡಲು ಏರ್ಪಾಡು ಮಾಡಿದ್ದಾರೆಂದು ತಿಳಿದು ಬಂದಿದೆ. ಈ ಸ್ವತ್ತಿನಲ್ಲಿ ನಮ್ಮ ನ್ಯಾಯಬದ್ಧ ಹಿಸ್ಸೆ ಬಂದಿಲ್ಲವಾದ ಕಾರಣ ಇದನ್ನು ಯಾರಾದರೂ ಕೊಂಡುಕೊಂಡಲ್ಲಿ ಅದು ಅನೂರ್ಜಿತವಾಗ ಬಹುದಾಗಿರುತ್ತೆ. ಹಾಗೆ ಕೊಂಡವರೇ ಮುಂದಿನ ಎಲ್ಲ ನಷ್ಟಗಳಿಗೆ ಹೊಣೆಯಾಗುತ್ತಾರೆಂದು ಈ ಮೂಲಕ ಎಚ್ಚರಿಸುತ್ತಿದ್ದೇನೆ.

ಲೇ|| ಅಂಗಡಿ ರಾಮಣ್ಣನವರ ಮಗ

**ಕೆ.ಆರ್.ಶೀನಪ್ಪ.**

ಮೇಲಿನಪೇಟೆ, ಕೊಪ್ಪ.

---

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
**ಸಿರಿಮನೆ ನಾಗರಾಜ್.**
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ

# ಹಳ್ಳಿಗಳ "ಮುಂಡ ಮೋಚಿಸುವ" ಕಾಮಗಾರಿಗಳ ವೈಖರಿ

ಕೊಪ್ಪ ತಾಲ್ಲೂಕಿನ ಪಿಡಬ್ಲ್ಯುಡಿ ಮತ್ತು ತಾ|| ಅ|| ಮಂ|| ಇವುಗಳಿಂದ ಈಗ ಹಳ್ಳಿಗಳಲ್ಲಿ ನಡೆಯುತ್ತಿರುವ ಕಾಮಗಾರಿಗಳು ಅಸಮರ್ಪಕ ರೀತಿಯಲ್ಲಿ ನಡೆಯುತ್ತಿವೆ. ಇದಕ್ಕೆ ಕಾರಣ ಸಂಬಂಧಪಟ್ಟ ಅಧಿಕಾರಿಗಳು ಮತ್ತು ಕಂಟ್ರ್ಯಾಕ್ಟರ್‌ಗಳು. ಉದಾಹರಣೆಗೆ ಟಾರು ರಸ್ತೆಗಳು. ವಾಹನ ಚಾಲಕರು ಇಂತಹ ರಸ್ತೆಯಲ್ಲಿ ವ್ಯಾಯಾಮ ಮಾಡಿಕೊಂಡು ಹೋಗಬೇಕು! ಮತ್ತು ಮಳೆಗಾಲದಲ್ಲಿ ನೀರು ರಸ್ತೆಯನ್ನು ಬಿಟ್ಟು ಹೊರಗೆ ಹೋಗುವುದಿಲ್ಲ. ನಾವು ರಸ್ತೆಯ ಮೇಲೆ ಓಡಾಡುವಾಗ ವಾಹನವೇನಾದರೂ ಬಂದರೆ ರಸ್ತೆಯ ಕೊಳಕು ನೀರು ಚಿಮ್ಮಿ ಬದಲಿಸುವುದಕ್ಕೋಸ್ಕರ ನಮ್ಮನ್ನು ಮನೆಗೆ ಕಳಿಸುತ್ತದೆ!

ಇನ್ನು ರಸ್ತೆಗಳಿಗೆ ಟಾರ್ ಹಾಕುವ ವೈಖರಿ ನೋಡಿ. ಜೆಲ್ಲಿಯಲ್ಲಿ ಕಾಣಸುವಷ್ಟು ಮಾತ್ರ ಟಾರ್ ಹಾಕಿ ಕಲಸಿ ರಸ್ತೆಗೆ ಹಾಕಿ ಎಂಜಿನ್ನಿನಿಂದ ಸಮಗೊಳಿಸಿ ಮತ್ತೆ ಹೊಯಿಗೆ, ಜೆಲ್ಲಿ, ಸ್ವಲ್ಪವೇ ಟಾರ್ ಹಾಕಿ ಕಲಸಿ ರಸ್ತೆಗೆ ಹಾಕುತ್ತಾರೆ. ಇದೇ ಕ್ರಮದಲ್ಲಿ ಕೆರೆ, ಬಾವಿ, ಸೇತುವೆ, ಮೋರಿಗಳಿಗೆ ಸಿಮೆಂಟ್ ತೋರಿಸಿ ದುರಸ್ತಿ ಮಾಡುತ್ತಾರೆ; ಹಳ್ಳಿಗಳ "ಮುಂಡ ಮೋಚಿಸುತ್ತಾರೆ".

ಈ ರೀತಿಯ ಕೆಲಸಗಳಿಂದ ಹಳ್ಳಿಯ ಅಭಿವೃದ್ಧಿ ಯಾದೀತೇ? ಅಧಿಕಾರಿಗಳು ಹಳ್ಳಿಯ ಅಭಿವೃದ್ಧಿ ಮಾಡಿ ತನ್ಮೂಲಕ ಹಳ್ಳಿಗಳ ಯೋಗಕ್ಷೇಮ ನೋಡಿಕೊಳ್ಳುವುದು ಹೀಗೆಯೇ?

ಕಾಮಗಾರಿ ಕೆಲಸಗಳು ಗ್ರಾಮಾಂತರ ಪ್ರದೇಶದಲ್ಲಿ ನಡೆಯುವುದು ಸರಿಯಷ್ಟೆ. ಯಾಕೆ ಗ್ರಾಮ ಪಂಚಾಯ್ತಿ ಕಚೇರಿಯ ನೋಟೀಸ್ ಬೋರ್ಡಿನ ಮೇಲೆ ಕಾಮಗಾರಿ ವಿವರ, ಸ್ಕೆಚ್, ಮಂಜೂರಾತಿ ಹಣ, ಕಂಟ್ರ್ಯಾಕ್ಟದಾರರ ಹೆಸರುಗಳು ಮುಂತಾದವನ್ನು ನಮೂದಿಸಬಾರದು? ಗ್ರಾಮಾಂತರ ಪ್ರದೇಶದಲ್ಲಿ ಹಳ್ಳಿಗರ ಯೋಗಕ್ಷೇಮವನ್ನು ವಿಚಾರಿಸಲು ಇರುವ ಸಂಸ್ಥೆ ಗ್ರಾಮ ಪಂಚಾಯ್ತಿ ಅಲ್ಲವೇ?

**—ಹೆಚ್. ಎಂ. ಕೃಷ್ಣಮೂರ್ತಿ,**
ಹೆಗ್ಗಾರ್.

## ಹೊಸ ಶಾಸಕರಿಗೆ ಸಲಹೆ

(೨ನೇ ಪುಟದಿಂದ)

ಮ್ಯಾರು) ಭೇಟಿಯ ಕಾರ್ಯಕ್ರಮ ಇಟ್ಟುಕೊಂಡರಂತೂ ಜನರಿಗೆ ದೊಡ್ಡದೊಂದು ಉಪಕಾರವೇ ಆಗುತ್ತದೆ.

ಗೋವಿಂದ ಗೌಡರು ಈ ಸಲಹೆಯನ್ನು ಕೂಡಲೇ ಕಾರ್ಯಗತಗೊಳಿಸುತ್ತಾರೆಂದು ನಂಬಿದ್ದೇನೆ. ಇದು ಅವರಿಗೆ ಸ್ವಲ್ಪ ದುಬಾರಿ ಅಸಾಧ್ಯ ಸಮಯ ತಿನ್ನುವಂಥದು ಎನ್ನಿಸಬಹುದು. ಆದರೆ ಕ್ಷೇತ್ರದ ಜನರಿಗಾಗಿ ಅವರು ಮಾಡಬಹುದಾದ ಕನಿಷ್ಠ ಕೆಲಸ ಇದು. ಇಷ್ಟಾದರೂ ಮಾಡಲು ಅವರಿಗೆ ಅವಕಾಶವಾಗಲಿಲ್ಲವೆಂದರೆ ಅವರ ಎಲ್ಲ ಕೃತಜ್ಞತೆಗಳು, ಧನ್ಯವಾದಗಳು ಬಾಯಿ ಮಾತು ಮಾತ್ರ ಎಂದು ಜನರಿಗೆ ಅನ್ನಿಸದಿರುವುದಿಲ್ಲ.

**—'ವಿನುಲೇಶ್', ನ.ರಾ.ಪುರ.**

# ಜಿಲ್ಲಾ ಲೇಖಕರ ಸಂಘದ ಸದಸ್ಯರಾಗಲು ಮನವಿ

ಚಿಕ್ಕಮಗಳೂರು ಜಿಲ್ಲೆಯಲ್ಲಿ ಸಾಹಿತ್ಯಕ ಚಟುವಟಿಕೆಗಳಲ್ಲಿ ಸಾಕಷ್ಟು ಮುಂದಿ ತೊಡಗಿದ್ದರೂ, ಅವರ ಸ್ಫೂರ್ತಿಗೆ ಸೂಕ್ತ ನೆರವಿನ ಅಭಾವವಿರುವುದೊಂದು (ಕೆಲವೊಂದು ತಾತ್ಸಾರ ಯುಕ್ತ ವ್ಯಕ್ತಿಗಳಿಂದ) ವಿಪರ್ಯಾಸ. ಜಿಲ್ಲೆಯಲ್ಲಿನ ಲೇಖಕರಿಗೆ ಶೂನ್ಯಸ್ಥಿತಿಯುಂಟಾಗಿದ್ದು, ಇಂತಹ ಶೂನ್ಯತೆಯನ್ನು ನಿವಾರಿಸಲೋಸುಗ ಜಿಲ್ಲೆಯಲ್ಲಿನ ಲೇಖಕರನ್ನು ಕಲೆ ಹಾಕಿ ಅವರ ಪ್ರತಿಭೆ ವಿಕಸನವಾಗುಂತಹ ಸಂಘಟನೆಯೊಂದನ್ನು ರೂಪಿಸಲು ಸುಮಾರು ಎರಡು ವರ್ಷಗಳಿಂದ ಚಿಕ್ಕಮಗಳೂರು ಜಿಲ್ಲಾ ಲೇಖಕರ ಸಂಘ ಶ್ರಮಿಸುತ್ತಿದೆ.

ಜಿಲ್ಲಾ ಲೇಖಕರ ಸಂಘವು ಈ ದಿಸೆಯಲ್ಲಿ ಲೇಖಕರನ್ನು ಸಂಘಟಿಸಲು ಮುದಾಗಿದ್ದು ಇದು ತನ್ನ ಕಾರ್ಯಕಾರಿ ಸಮಿತಿಗೆ ಉದಯೋನ್ಮುಖ ಮತ್ತು ಹೆಸರಾಂತ ಲೇಖಕರನ್ನು ಸದಸ್ಯರನ್ನಾಗಿ ಮಾಡಿಕೊಳ್ಳುವಂತೆ ಆದೇಶ ನೀಡಲಾಗಿದ್ದು, ಜಿಲ್ಲೆಯಲ್ಲಿನ ಎಲ್ಲಾ ಬರಹಗಾರರು ಬರಹಗಾರರ ಸಂಘಟನೆಯಲ್ಲಿ ಆಸಕ್ತಿ ವಹಿಸಿ ತಮ್ಮ ಸದಸ್ಯತ್ವವನ್ನು ಪಡೆಯಬೇಕಾಗಿ ವಿನಂತಿಸಿಕೊಳ್ಳುತ್ತೇವೆ.

ಶೃಂಗೇರಿ, ಕೊಪ್ಪ ತಾಲ್ಲೂಕುಗಳ ಉದಯೋನ್ಮುಖ/ಹೆಸರಾಂತ ಬರಹಗಾರರು ವಿವರಗಳಿಗೆ ಹುಲಿಕೆರೆ ಮಂಜುನಾಥ್, ಪತ್ರಿಕಾ ಪ್ರತಿನಿಧಿ, ಕಟ್ಟಿನಮನೆ 577127, ನರಸಿಂಹರಾಜಪುರ ತಾಲ್ಲೂಕು, ಅಥವಾ ಎ.ಎಸ್. ಗಣೇಶ್ ರಾವ್, ಅರಸೀತೋಟ, ಕಸ್ಕೆರೆ ಅಂಚೆ, ಕೊಪ್ಪ ತಾ|| ಇವರುಗಳನ್ನು ಸಂಪರ್ಕಿಸಬೇಕೆಂದು ಕೋರುತ್ತೇವೆ.

ನರಸಿಂಹರಾಜಪುರ ತಾಲ್ಲೂಕಿಗೆ ಸಂಬಂಧಪಟ್ಟಂತೆ, ಬಿ.ಎ. ಜ್ವಾಲನಪ್ಪ, ಲೇಖಕರು, ಅಗ್ರಹಾರ, ನರಸಿಂಹರಾಜಪುರ, ಇವರಲ್ಲಿ ಸಂಪರ್ಕಿಸಬಹುದಾಗಿದೆ.

**—ಹುಲಿಕೆರೆ ಮಂಜುನಾಥ್,**
**ಅರಸೀತೋಟ ಗಣೇಶರಾವ್,**
ಕಾರ್ಯಕಾರಿ ಸಮಿತಿ ಸದಸ್ಯರು,
ಚಿಕ್ಕಮಗಳೂರು ಜಿಲ್ಲಾ ಲೇಖಕರ ಸಂಘ.

## ಕೊಪ್ಪ ರಸ್ತೆಯ ದುಃಸ್ವಪ್ನ

(೨ನೇ ಪುಟದಿಂದ)

ವಾದ ಮಿತಿ, ಕರ್ಕಶವಾದ ಹಾರ್ನ್‌ಗಳ ನಿಷೇಧ, ಕೆಲವು ಅತಿ ಅಪಾಯಕಾರಿ ತಿರುವುಗಳಲ್ಲಿ ರಸ್ತೆ ಉಬ್ಬು ನಿರ್ಮಿಸುವುದು ಮುಂತಾದುವು ಪ್ರಮುಖ ಸಲಹೆಗಳಾಗಿದ್ದವು. ಅದರಲ್ಲಿ, ಆಗಿನ ಶಾಸಕಾಧಿಕಾರಿ ಪುಟ್ಟಸ್ವಾಮಿ ಗೌಡರು ವೇಗದ ಮಿತಿಯ ಬಗ್ಗೆ ಕ್ರಮ ತೆಗೆದುಕೊಂಡಿದ್ದರು ಹಾಗೂ ಕರ್ಕಶ ಹಾರ್ನ್‌ಗಳ ಬಗ್ಗೆ ಕ್ರಮ ತೆಗೆದುಕೊಳ್ಳುವ ಭರವಸೆ ಕೊಟ್ಟಿದ್ದರು. ಅದರೆ ಮತ್ತೇನಾಯಿತೋ ಗೊತ್ತಿಲ್ಲ. ಲೋಕೋಪಯೋಗಿ ಇಲಾಖೆಯವರು ಏನೂ ಕ್ರಮ ತೆಗೆದುಕೊಂಡಂತೆ ಕಾಣಲಿಲ್ಲ.

[ಕರ್ಕಶವಾದ ಹಾರ್ನ್‌ಗಳನ್ನು 'ಸ್ಫೋಟಿಸಿದಾಗ' ಚಿಕ್ಕ ಮಕ್ಕಳು ಬೆಚ್ಚಿ ಚೀರುತ್ತವೆ; ಮುದುಕರು, ಅಶಕ್ತರು ಮುಗ್ಗರಿಸುತ್ತಾರೆ, ಅಥವಾ ಚರಂಡಿಗೋ, ಚಪ್ಪಡಿ ಸಂದಿಗೋ ಕಾಲು ಹಾಕಿಕೊಳ್ಳುತ್ತಾರೆ. ಇಂಥ ಹಾರ್ನಿನ ಒಂದು ಉದಾಹರಣೆ ಶಂಕರ್ ಕಂಪನಿಯ ಎಂಪೈರ್ ಬಸ್ಸಿನಲ್ಲಿದೆ.]

ಈಗಲಾದರೂ ಸಂಬಂಧಪಟ್ಟವರು ಕೂಡಲೇ ಕ್ರಮ ತೆಗೆದುಕೊಂಡು ಈ ರಸ್ತೆಯ ದುಃಸ್ವಪ್ನವನ್ನು ನಿವಾರಿಸಬೇಕಾಗಿದೆ. **ವಾಹನಗಳ ಮಾಲೀಕರೂ, ಚಾಲಕರೂ ಸಹ ತಮಗೂ ಮಕ್ಕಳು-ಮರಿ ಇರುವುದನ್ನು ಜ್ಞಾಪಕದಲ್ಲಿಟ್ಟುಕೊಂಡರಂತೂ ಸಮಸ್ಯೆ ಅರ್ಧ ಬಗೆಹರಿದೇ ಬಿಡುತ್ತದೆ.**

## ಬೇಗಾರು ಹಾಲು ಸಂಗ್ರಹಣೆ ಕೇಂದ್ರಕ್ಕೆ ಹಾಲು ತಲ್ಪಿಸಲು ಉತ್ಪಾದಕರಿಗೆ ಸಲಹೆ

ಬೇಗಾರು: ಇಲ್ಲಿನ ವ್ಯವಸಾಯ ಸೇವಾ ಸಹಕಾರ ಸಂಘದಲ್ಲಿ ಹಾಲು ಸಂಗ್ರಹಣಾ ಕೇಂದ್ರ ಕಳೆದ ಡಿಸೆಂಬರ್ ೧೬ರಿಂದ ಪ್ರಾರಂಭಗೊಂಡಿದ್ದು, ಇಲ್ಲಿಂದ ಪ್ರತಿದಿನ ಬೆಳಗ್ಗೆ ೫೦ರಿಂದ ೬೦ ಲೀಟರ್ ಹಾಲು ಸಂಗ್ರಹಣೆಯಾಗಿ ಬಾಳೆಹೊನ್ನೂರಿನ ಚಿಲ್ಲಿಂಗ್ ಪ್ಲಾಂಟ್‌ಗೆ ರವಾನೆ ಮಾಗುತ್ತಿದೆ. ಹಾಲಿನ ಗುಣಮಟ್ಟ ಪರೀಕ್ಷಿಸಿ ಅವಶ್ಯವುಳ್ಳವಾಗಿ, ಕರಾರುವಾಕ್ಕಾಗಿ ಹಣ ಕೊಡಲಾಗುವುದು. ಶಾನೊಳ್ಳಿ, ನಿಲುವಾಗಿಲು ಸುತ್ತಮುತ್ತಲ ಹಾಲು ಉತ್ಪಾದಕರೂ ಸಹ ಬೆಳಗ್ಗೆ ೯ ಘಂಟೆಯೊಳಗೆ ಸಂಘಕ್ಕೆ ಹಾಲು ತಲುಪಿಸಿದಲ್ಲಿ ಎಷ್ಟಿದ್ದರೂ ಕೊಳ್ಳುವುದಾಗಿ ಸಂಘದ ವಕ್ತಾರರು 'ಮುಂಜಾವು'ಗೆ ತಿಳಿಸಿದ್ದಾರೆ.

ಜ. ೧೬ರ ನಮ್ಮ 'ಹಾಲು ಸಂಗ್ರಹಣೆ ಕೇಂದ್ರ ಆರಂಭಿಸಲು ಎಮ್ಮೆ ಸಾಕಿದ ಬಡವರ ಮನವಿ' ಎಂಬ ವರದಿ ಕುರಿತು ಮೇಲ್ಕಂಡ ಪ್ರತಿಕ್ರಿಯೆ ಬಂದಿದೆ.

## ಲೆವಿ ಗೇಟ್ ಧಿಕ್ಕರಿಸಿ ರೈತರ "ಲಾಭ ಯಾತ್ರೆ"

(ವಿಶೇಷ ವರದಿ: ಕೋಡ್ಲು ವೆಂಕಟೇಶ್)

ಜ. ೨೭ರ ರಾತ್ರಿಯೇ ಆಗುಂಬೆಯ ದೇವಸ್ಥಾನದೆದುರು, ಎಲ್ಲ ರೀತಿಯಿಂದ ಸಜ್ಜಾದ ರೈತರ ಎತ್ತಿನ ಗಾಡಿಗಳು ಬತ್ತವನ್ನು ತುಂಬಿಕೊಂಡು ಬಂದು ಸೇರಿದವು. ೨೮ರ ಬೆಳಗ್ಗೆ ೯ ಗಂಟೆಗೆ ದೇವಸ್ಥಾನದೆದುರು ಬಯಲಿನಲ್ಲಿ ಸಭೆ ಸೇರಿ ಪ್ರಯಾಣದಲ್ಲಿ ಶಾಂತಿ, ಶಿಸ್ತು ಕಾಪಾಡುವ ಬಗ್ಗೆ ಕುರಿತು ಮಾತನಾಡಿ, ಹಸಿರು ಬಾವುಟಗಳನ್ನೇರಿಸಿ, ಜಾನಪದ ವಾದ್ಯಗಳೊಂದಿಗೆ ಎತ್ತಿನಗಾಡಿಗಳು ಮತ್ತು ಟ್ರ್ಯಾಕ್ಟರುಗಳನ್ನು ರೈತರ ಮೆರವಣಿಗೆಯೊಂದಿಗೆ ಹೊರಡಿಸಲಾಯ್ತು.

ಹಿಂದಿನ ದಿನ ರಾತ್ರಿಯೆ ಬಂದು ಬಿಡಾರ ಹೂಡಿದ್ದ ೧೫೦ಕ್ಕೂ ಹೆಚ್ಚು ಮಂದಿ ಲಾಠಿ ಬಂದೂಕುಧಾರಿ ಸುಸಜ್ಜಿತ ಪೋಲೀಸ್ ಪಡೆ ಲೆವಿ ಗೇಟಿನ ಕಾವಲಿನಲ್ಲಿ ನಿಂತಿತ್ತು. ಅವರನ್ನು ಬದಿಗಿರಿಸಿ ಲೆವಿ ಗೇಟಿಂದು ಹಾಕಿಕೊಂಡ "ಬಲಿಗಿಗಳು"ವನ್ನು ಗುಜ್ಜು ಸಮೇತ ಕಿತ್ತು ಎತ್ತಿಕೊಂಡು ಘೋಷಣೆ ಕೂಗುತ್ತಾ ಹೊರಟ ರೈತರ ದಂಡನ್ನು ಮೂಕ ಪ್ರೇಕ್ಷಕರಾಗಿ ಪೋಲೀಸ್ ಪಡೆ ನೋಡುತ್ತಾ ಕುಳಿತಿದ್ದುದು ನಿಜಕ್ಕೂ ವಿಶೇಷವಾದ ದೃಶ್ಯವಾಗಿತ್ತು.

ಹೀಗೆ ಹೊರಟ ರೈತರ ದಂಡು ಸೋಮೇಶ್ವರದ ವರೆಗೆ ಕಾಲ್ನಡಿಗೆಯಲ್ಲಿ ತೆರಳಿ ಭತ್ತ ಖಾಲಿಮಾಡಿ, ದ.ಕನ್ನಡ ಜಿಲ್ಲೆಯ ವ್ಯಾಪಾರಸ್ಥರು ಮತ್ತು ಅಭಿಮಾನಿಗಳ ಸ್ವಾಗತದೊಂದಿಗೆ ಹೆಬ್ರಿಯಲ್ಲಿ ಅವರೇ ಏರ್ಪಡಿಸಿದ್ದ ಭೋಜನ ಕೂಟದಲ್ಲಿ ಪಾಲ್ಗೊಂಡು ಸಂತೃಪ್ತರಾಗಿ ಮತ್ತೆ ವಾಪಾಸು ಸೋಮೇಶ್ವರಕ್ಕೆ ಬಂದು ತಮ್ಮ ಭತ್ತವನ್ನು ಒಳ್ಳೇ ದರದಲ್ಲಿ ವ್ಯಾಪಾರ ಮಾಡಿ (ಕ್ವಿಂ. ಒಂದರ ೧೭೦ರೂ.) ಸೋರಲು, ಬಂಗಡೆ ಮೀನು ಮತ್ತು ಜವಳಿಯನ್ನು ಖರೀದಿ ಮಾಡಿಕೊಂಡು ಸಂತೋಷವಾಗಿ ಮರಳಿದರು.

## ಹರಿಹರಪುರ ಕಿರಿಯ ಕಾಲೇಜು ಹಗರಣಕ್ಕೆ ಮಂಗಳ

(ನಮ್ಮ ಪ್ರತಿನಿಧಿಯಿಂದ)

ಹರಿಹರಪುರ: ಇಲ್ಲಿನ ಕಿರಿಯ ಕಾಲೇಜಿನಲ್ಲಿ ತಾತ್ಕಾಲಿಕವಾಗಿ ಶೈಕ್ಷಣಿಕ ವಿಭಾಗದ ಪದನಿಮಿತ್ತ ಪ್ರಾಂಶುಪಾಲರಾಗಿ ಎಸ್. ವೆಂಕಟರಮಣ ಅಡಿಗ ಅವರನ್ನು ಪರಿಗಣಿಸಿ ಈ ಹಿಂದೆ ಹೊರಡಿಸಿದ್ದ ಆಜ್ಞೆಯನ್ನು ಶಿಕ್ಷಣ ಇಲಾಖೆ ಜಂಟಿ ನಿರ್ದೇಶಕರು ಹಿಂತೆಗೆದುಕೊಂಡಿದ್ದು, ಒಂದು ಸಂಸ್ಥೆಗೆ ಇಬ್ಬರು ಮುಖ್ಯಸ್ಥರಿರಲು ಸಾಧ್ಯವಿಲ್ಲ ಎಂದು ತಿಳಿಸಿದ ಪತ್ರ ಜ. ೨೭ರಂದು ಚಿಕ್ಕಮಗಳೂರಿನ ಡಿಡಿಪಿಐ ಕಚೇರಿಯಿಂದ ಹೊರಟಿದೆ.

ಈ ಮಧ್ಯೆ, ತಮ್ಮನ್ನು ಪ್ರಿನ್ಸಿಪಾಲರಾಗಿ ನಿಯಮಿಸಿದ ಆದೇಶವನ್ನು ಹಿಂತೆಗೆದುಕೊಂಡು ಹಿಂದಿನಂತೆ ಉಪನ್ಯಾಸಕನಾಗಿ ಮುಂದುವರಿಸಬೇಕೆಂದು ಕೋರಿ ವೆಂಕಟರಮಣ ಅಡಿಗರು ಕಾಲೇಜು ಆಡಳಿತ ಸಮಿತಿಗೆ ಮನವಿ ಸಲ್ಲಿಸಿದ್ದಾರೆ.

ಇಲಾಖಾ ನಿಯಮಗಳು ಮತ್ತು ಸೇವಾ ಹಿರಿತನ ಮುಂತಾದ ಎಲ್ಲ ವಿಷಯದಲ್ಲೂ ಪ್ರಾಂಶುಪಾಲರಾಗಿ ನೇಮಕವಾಗಬೇಕಾದ ಬಿ.ಎಸ್. ಸತ್ಯನಾರಾಯಣ ಅವರ

(೬ನೇ ಪುಟಕ್ಕೆ)

[illegible]

# ವಿದ್ಯಾಪ್ರಸಾರಕ್ಕೆ ಸಹಕಾರ ಎಲ್ಲರ ಕರ್ತವ್ಯ
## —ಹರಿಹರಪುರ ಗುರುಗಳು

ಶಿಗ್ಗ: "ವಿದ್ಯೆಯ ಪ್ರಸಾರಕ್ಕಾಗಿ ಕೆಲಸ ಮಾಡುವುದು ಪ್ರತಿಯೊಬ್ಬನ ಕರ್ತವ್ಯ. ಆದ್ದರಿಂದ, ಈ ಶಾಲಾ ಕಟ್ಟಡಕ್ಕಾಗಿ ದಾನ ಮಾಡಿದವರೂ, ಅವಿರತ ಶ್ರಮ ಪಟ್ಟವರೂ ತಮ್ಮ ಕರ್ತವ್ಯವನ್ನಷ್ಟೇ ಮಾಡಿದ್ದಾರೆ, ಹೆಚ್ಚೇನಿಲ್ಲ."

ಹೀಗೆಂದವರು ಹರಿಹರಪುರ ಮಠಾಧೀಶರು. ಜ. ೩೧ರಂದು ಇಲ್ಲಿನ ಪ್ರೌಢಶಾಲೆಯ ನೂತನ ಕಟ್ಟಡದ ಪ್ರಾರಂಭೋತ್ಸವದಲ್ಲಿ ಆಶೀರ್ವಚನ ನೀಡಿದ ಅವರು ಮುಂದುವರಿದು, "ಪ್ರತಿಯೊಬ್ಬ ಮನುಷ್ಯನೂ ನಾಲ್ಕು ಜನರಿಗಾದರೂ ಉಪಕಾರಿಯಾಗಿರಬೇಕು. ಸಾಧ್ಯವಿಲ್ಲದಿದ್ದರೆ ತನ್ನವರಿಗಷ್ಟಾದರೂ ಉಪಕಾರ ಮಾಡಬೇಕು. ಈ ದಿಕ್ಕಿನಲ್ಲಿ ಮೊಟ್ಟ ಮೊದಲ ಕೆಲಸವೆಂದರೆ ತಂತಮ್ಮ ಮಕ್ಕಳನ್ನು ವಿದ್ಯಾವಂತರಾಗಿ ಮಾಡುವುದು. ಸರಿಯಾದ ವಿದ್ಯೆ ಕಲಿತ ಮಕ್ಕಳು ಮುಂದೆ ಸುಸಂಸ್ಕೃತ ಜನಾಂಗವಾಗುತ್ತಾರೆ" ಎಂದರು.

### ಆಕರ್ಷಕ ಕವಾಯಿತು

ಶಾಲೆಯ ದೈಹಿಕ ಶಿಕ್ಷಕ ಗೋಪಾಲಪ್ಪ ಅವರ ತರಬೇತಿಯಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಉರಿ ಬಿಸಿಲಿನಲ್ಲೂ ಆಕರ್ಷಕ ಕವಾಯಿತು ಪ್ರದರ್ಶಿಸಿದರು. ಸಮಾರಂಭದ ಅಧ್ಯಕ್ಷ ಕೆ.ಸಿ.ಶಿವಶಂಕರ ರಾವ್ ದಳಗರಿಂದ ವಂದನೆ ಸ್ವೀಕರಿಸಿದರು.

ಕಟ್ಟಡದ ಉದ್ಘಾಟನೆ ನೆರವೇರಿಸಿದ ಶಾಸಕ ಹೆಚ್.ಜಿ.ಗೋವಿಂದಗೌಡರು ಶಾಲಾ ಸಮಿತಿಯ ಪ್ರಯತ್ನವನ್ನು ಹೊಗಳಿ, ಕಟ್ಟಡಕ್ಕಾಗಿ ಸರ್ಕಾರದಿಂದ ಎಲ್ಲ ನೆರವಿನ ಭರವಸೆ ಕೊಟ್ಟರು.

ಮುಖ್ಯ ಅತಿಥಿ ಕೋಗಿನಷ್ಟೈಲು ಮಂಜಪ್ಪ ನಾಯ್ಕ, ಗಿರಿಯಪ್ಪಗೌಡ, ಎಂ.ಶ್ರೀನಿವಾಸಶೆಟ್ಟಿ ಮುಂತಾದವರು ಮಾತನಾಡಿದರು. ಎಸ್.ಗುಂಡಪ್ಪ ಹೆಗ್ಡೆ ಸ್ವಾಗತಿಸಿ, ಹೆಚ್. ಎ.ಶ್ರೀನಿವಾಸ್ ವಂದಿಸಿದರು.

### ಗೋವಿಂದ ಗೌಡರ ಜನಸಂಪರ್ಕ ಕಾರ್ಯಕ್ರಮ

ಶಾಲಾ ಕಟ್ಟಡದ ಉದ್ಘಾಟನೆ ನೆರವೇರಿಸಿದ ನಂತರ ಶಾಸಕ ಹೆಚ್.ಜಿ.ಗೋವಿಂದ ಗೌಡರು ಇಲ್ಲಿ ಸಾರ್ವಜನಿಕ ಸಂಪರ್ಕ ಸಭೆಯಲ್ಲಿ ಮಾತನಾಡಿ, ನಿಷ್ಠೆಯಿಂದ ಜನರ ಕೆಲಸ ಮಾಡುವ ಭರವಸೆ ಕೊಟ್ಟರು. ಹಲವಾರು ಗ್ರಾಮಸ್ಥರು ಬಹು ದಿನಗಳ ತಮ್ಮ ಕುಂದು–ಕೊರತೆಗಳ ಬಗ್ಗೆ ಮನವಿಗಳನ್ನು ಸಲ್ಲಿಸಿದರು.

# ಕಲಾವಿದ ಎಂ.ಟಿ.ವಿ. ಆಚಾರ್ಯರಿಗೆ ಶೃಂಗೇರಿ ಗುರುಗಳಿಂದ ಸನ್ಮಾನ

(ವರದಿ: ಶಂ.ಸ.ಶೇಷಗಿರಿ)

ಶೃಂಗೇರಿ: ೧೦ ದಿನಗಳ ಕಾಲ ಶೃಂಗೇರಿಯಲ್ಲಿ ಕಲಾ ಶಿಬಿರ ನಡೆಸಿದ ಖ್ಯಾತ ಕಲಾವಿದ ಎಂ.ಟಿ.ವಿ.ಆಚಾರ್ಯರು ತಮ್ಮ ಕಲಾಕೃತಿಗಳನ್ನು ಜಗದ್ಗುರುಗಳವರ ಸಮ್ಮುಖದಲ್ಲಿ ಪ್ರದರ್ಶಿಸಿದರು.

೩೦ ವಿದ್ಯಾರ್ಥಿಗಳು ಹಾಗೂ ಧರ್ಮಪತ್ನಿಯೊಂದಿಗೆ ಆಚಾರ್ಯರು ಗುರುದರ್ಶನ ಮಾಡಿದ ಸಂದರ್ಭದಲ್ಲಿ ಆಚಾರ್ಯರ ಕಲಾವಂತಿಕೆಯನ್ನು ಮೆಚ್ಚಿದ ಗುರುಗಳು ಜರಿಶಾಲು ಹೊದಿಸಿ ಆಚಾರ್ಯರನ್ನು ಸನ್ಮಾನಿಸಿದರು ಹಾಗೂ ಎಲ್ಲರಿಗೂ ಫಲ ಮಂತ್ರಾಕ್ಷತೆ ನೀಡಿ ಆಶೀರ್ವದಿಸಿದರು.

## ಬಿ. ಜೆ. ಪಿ. ಸಭೆ

ಕೊಪ್ಪ: ಭಾರತೀಯ ಜನತಾ ಪಕ್ಷದ ಕೊಪ್ಪ ತಾ॥ ಸರ್ವಸದಸ್ಯರ ಸಭೆಯನ್ನು ಫೆ. ೧೩ರ ಬೆಳಿಗ್ಗೆ ೧೦ ಗಂಟೆಗೆ ಇಲ್ಲಿನ ಪುರಭವನದಲ್ಲಿ ಕರೆಯಲಾಗಿದೆಯೆಂದು ಕಾರ್ಯದರ್ಶಿ ಬಿ.ಎಸ್.ವಿಠ್ಠಲರಾವ್ ತಿಳಿಸಿದ್ದಾರೆ.

# ಮೈತ್ರಿ ಮಹಿಳಾ ಸಮಾಜದ ಬಹುಮಾನ ಯೋಜನೆ ಡ್ರಾ

ಗುಡ್ಡೇತೋಟ: ಇಲ್ಲಿನ ಮೈತ್ರಿ ಮಹಿಳಾ ಸಮಾಜದವರು ಏರ್ಪಡಿಸಿದ್ದ "ಬಹುಮಾನ ಯೋಜನೆ"ಯ ಡ್ರಾ ಜ. ೧೪ರಂದು ಪಂಚಾಯ್ತಿ ಅಧ್ಯಕ್ಷರು, ತರುಣ ರೈತ ಸಂಘದ ಸದಸ್ಯರು ಹಾಗೂ ಅಭಿಮಾನಿಗಳ ಸಮ್ಮುಖದಲ್ಲಿ ಪುಟಾಣಿಗಳಾದ ವರದರಾಜ್, ಶ್ರೀಕಂಠ, ಶಶಿಕಾಂತ್ ಇವರುಗಳಿಂದ ನೆರವೇರಿತು. ಅಭಿಮಾನಿಗಳು ಸಮಾಜದ ಕಾರ್ಯ ಚಟುವಟಿಕೆಗಳನ್ನು ಪ್ರಶಂಸಿಸಿದರು.

## ಧ್ವಜ ಪ್ರದಾನೋತ್ಸವ

ಹೊಸಕೊಪ್ಪ: ರಾ.ಸ್ವ.ಸಂಘದ ಸ್ಥಳೀಯ ಶಾಖೆಯಲ್ಲಿ ಇದೇ ೨೮ರಂದು ಧ್ವಜ ಪ್ರದಾನೋತ್ಸವ ಸಮಾರಂಭ ಜರುಗಿತು. ರೈತ ಮುಂದಾಳು ಎ.ಎಸ್.ದೇವಪ್ಪಗೌಡರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭದಲ್ಲಿ ಸಂಘದ ಶಿವಮೊಗ್ಗ ವಿಭಾಗ ಪ್ರಚಾರಕ್ ಮಾ। ಸೀತಾರಾಂ ರಾ.ಸ್ವ.ಸಂಘದ ಕಾರ್ಯದ ಮಹತ್ವ, ಔಚಿತ್ಯ ವಿವರಿಸಿ ಹಿಂದುತ್ವದ ಮರೆವೇ ದೇಶದಲ್ಲಿನ ಸಮಸ್ಯೆಗಳಿಗೆ ಕಾರಣ. ಸಂಘಟಿತ ಜನಶಕ್ತಿಯ ನಿರ್ಮಾಣ ಕಾರ್ಯ ಸಂಘ ನಡೆಸುತ್ತಿದೆ. ಈ ಕಾರ್ಯದಲ್ಲಿ ನೀವೆಲ್ಲ ಪಾಲ್ಗೊಂಡು ಸಂಘ ಸಂದೇಶ ಎಲ್ಲೆಡೆಗೂ ಶೀಘ್ರ ತಲುಪಿಸಿ ಎಂದು ಕೋರಿದರು. ಕೃಷ್ಣಪ್ಪ ಆರಂಭದಲ್ಲಿ ಸ್ವಾಗತಿಸಿ ಅತಿಥಿಗಳನ್ನು ಪರಿಚಯಿಸಿದರು. ಸ್ವಯಂ ಸೇವಕರಿಂದ ಸೂರ್ಯ ನಮಸ್ಕಾರ–ಯೋಗಾಸನ ಪ್ರದರ್ಶನ ನಡೆಯಿತು.

# ಗಣರಾಜ್ಯೋತ್ಸವ

### ಹೊಸಕೊಪ್ಪ

ಇಲ್ಲಿನ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಪಂಚಾಯ್ತಿ ಅಧ್ಯಕ್ಷ ಬಿ.ಎಂ.ಗೋಪಾಲರ ಅಧ್ಯಕ್ಷತೆಯಲ್ಲಿ ಗಣರಾಜ್ಯೋತ್ಸವ ಜರುಗಿತು. ಮುಡುಮುಡಿಯ ಲಕ್ಷ್ಮಣಯ್ಯ ಧ್ವಜಾರೋಹಣ ಮಾಡಿದರು. ಗಣರಾಜ್ಯೋತ್ಸವ ಆಚರಣೆ ಔಚಿತ್ಯ–ಮಹತ್ವ ಮತ್ತು ಈ ಶುಭ ದಿನದಂದು ಪ್ರತಿಯೊಬ್ಬನೂ ಮಾಡಬೇಕಾದ ಕಾರ್ಯ ಕುರಿತು ಎ.ಬಿ.ವಾಸಪ್ಪ, ಕಂ.ಕ ಕೃಷ್ಣಮೂರ್ತಿ, ಅಬ್ದುಲ್ ಸಾಹೇಬ್ ಮಾತನಾಡಿದರು. ಶಾಲಾ ಶಿಕ್ಷಕ ಹೊ.ಸೀ. ಶಿವಸ್ವಾಮಿ ಸ್ವಾಗತಿಸಿ, ರಂಗಸ್ವಾಮಿ ವಂದಿಸಿದರು.

### ಅಗಳಗಂಡಿ

ಪಂಚಾಯ್ತಿ ಅಧ್ಯಕ್ಷ ಹೆಚ್.ಟಿ. ರಾಮಪ್ಪ ಗೌಡರ ಅಧ್ಯಕ್ಷತೆಯಲ್ಲಿ ಇಲ್ಲಿನ ಶಾಲೆಯಲ್ಲಿ ನಡೆದ ಗಣರಾಜ್ಯೋತ್ಸವ ಸಮಾರಂಭದಲ್ಲಿ ಬಡಮಕ್ಕಳಿಗೆ ಪಂಚಾಯ್ತಿ ವತಿಯಿಂದ ಬಟ್ಟೆ ಹಂಚಲಾಯಿತು. ಸರ್ಕಾರದಿಂದ ಒದಗಿಸಿದ ಬಟ್ಟೆಯನ್ನು ಶಾಲಾ ಸಮಿತಿ ಸದಸ್ಯ ಕೃಷ್ಣದೇವರಯ್ಯ ಹಂಚಿದರು. ಮಕ್ಕಳಿಗೆ ಸಿಹಿ ತಿಂಡಿ ಹಂಚಲಾಯಿತು.

### ಬೇಗಾರು

ಧ್ವಜಾರೋಹಣ, ಬಿದಿರುಗೋಡು – ಬೇಗಾರು ನಡುವೆ ಪ್ರಭಾತ್ ಫೇರಿ ನಂತರ ಕೆ.ಟಿ.ಸಂಜೀವ ಗೌಡರ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು. ಶಾಲಾಭಿವೃದ್ಧಿ ಸಮಿತಿಯಲ್ಲಿ ಬಹಳ ಕಾಲ ಸೇವೆ ಸಲ್ಲಿಸಿದ ಮಾಜಿ ಪೋಸ್ಟ್ ಮಾಸ್ಟರ್ ಬಿ. ವಿಶ್ವನಾಥಯ್ಯ ಅವರಿಗೆ ಶಾಲು ಹೊದಿಸಿ ಸನ್ಮಾನಿಸಲಾಯಿತು.

ಯು. ಎಸ್. ಪ್ರಭಾಕರ ಸ್ವಾಗತಿಸಿ, ಮುಖ್ಯೋಪಾಧ್ಯಾಯ ಎಲ್. ತಿಮ್ಮಪ್ಪ ಗೌಡ ವಂದಿಸಿದರು. ಮಕ್ಕಳಿಗೆ ಸಿಹಿ ಹಂಚಲಾಯಿತು.

### ಅದ್ದಡ ಶಾಲೆ

ಅದ್ದಡ ಹಿ.ಪ್ರಾ.ಶಾಲೆಯಲ್ಲಿ ಗಣರಾಜ್ಯೋತ್ಸವ ಸಮಾರಂಭ ಕೊಪ್ಪ ಗ್ರಾಮ ಪಂಚಾಯ್ತಿ ಅಧ್ಯಕ್ಷ ಜಿ.ಡಿ.ಪರಮೇಶ್ವರ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಎಸ್. ಪಿ. ಶ್ರೀನಿವಾಸ್ ಸ್ವಾಗತಿಸಿ, ಹೆಚ್. ಸಿ. ದೂಮಪ್ಪ ವಂದಿಸಿದರು. ಮಕ್ಕಳಿಗೂ ಅತಿಥಿಗಳಿಗೂ ಸಿಹಿತಿಂಡಿ ಹಂಚಲಾಯಿತು.

## ಬಾಲ್ ಬ್ಯಾಡ್ಮಿಂಟನ್ ಮತ್ತು ತ್ರೋಬಾಲ್ ಸ್ಪರ್ಧೆಗಳು

ಹರಿಹರಪುರ: ಇಲ್ಲಿನ ಶಾರದಾ ಕ್ರೀಡಾ ಸಂಘದ ಆಶ್ರಯದಲ್ಲಿ ಫೆ. ೧೯ ಮತ್ತು ೨೦ರಂದು ಜಿಲ್ಲಾಮಟ್ಟದ ಪುರುಷರ ಬಾಲ್ ಬ್ಯಾಡ್ಮಿಂಟನ್ ಮತ್ತು ೨೦ರಂದು ಕ್ಷೇತ್ರ ಮಟ್ಟದ ಮಹಿಳೆಯರ ತ್ರೋಬಾಲ್ ಸ್ಪರ್ಧೆಗಳು ನಡೆಯಲಿವೆ.

## ಕಟ್ಟಿನಮನೆ ಸುತ್ತಮುತ್ತ ಹುಲಿ ಕಾಟ

(ವರದಿ: ಹುಮನಾ)

ಕುದ್ರೆಗುಂಡಿ: ಇಲ್ಲಿಗೆ ಸಮೀಪದ ಕಟ್ಟಿನಮನೆ ಊರಿನ ಸುತ್ತಮುತ್ತ ಹುಲಿಕಾಟ ವಿಪರೀತವಾಗಿದ್ದು, ಕಳೆದ ಒಂದು ವಾರದಿಂದ ಹಲವಾರು ಜಾನುವಾರುಗಳು ಇದರ ಬಾಯಿಗೆ ತುತ್ತಾಗಿವೆ. ಊರಿನಿಂದ ನೂರಿನ್ನೂ ಮೀಟರ್‌ಗಳಷ್ಟು ಹತ್ತಿರದಲ್ಲೇ ಹೊಂಚುವ ಹುಲಿ ಕಳೆದ ವಾರ ಊರಿನ ಕೆರೆಯ ಬಳಿ ೧ ಸಾವಿರ ರೂ. ಬೆಲೆ ಬಾಳುವ ಹಸುವೊಂದನ್ನು ಹಿಡಿದಿದೆ.

ಈಗ ಜನ ತಮ್ಮ ಜಾನುವಾರುಗಳನ್ನು ಮೇಯಲು ಬಿಡದೆ ಕಟ್ಟಿಹಾಕುವುದರಿಂದ ಹುಲಿ ಕ್ರಮೇಣ ಊರಿಗೆ ನುಗ್ಗೀತೆಂದು ಊರವರಿಗೆ ದಿಗಿಲಾಗಿದೆ.

ಹುಲಿಯನ್ನು ಕೊಲ್ಲುವುದು ಕಾನೂನು ಬಾಹಿರವಾದ್ದರಿಂದ ಜನ ಅಸಹಾಯಕರಾಗಿ ಸಹಾಯಕ್ಕೆ ಅರಣ್ಯ ಇಲಾಖೆ ಕಡೆ ನೋಡುತ್ತಿದ್ದಾರೆ.

## ಗೋವಿಂದಗೌಡರಿಗೆ 'ಟೀ'

ಶೃಂಗೇರಿ: ಜ. ೩೧ರಂದು ಕ್ಷೇತ್ರದ ಹೊಸ ಶಾಸಕ ಹೆಚ್ ಜಿ. ಗೋವಿಂದಗೌಡರು ಇಲ್ಲಿಗೆ ಭೇಟಿ ಕೊಟ್ಟಿದ್ದಾಗ ಇಲ್ಲಿನ 'ಸೋಶಿಯಲ್ ಫೋರಂ'ನವರು ಅವರಿಗೆ 'ಟೀ' ಕೊಟ್ಟು ಸತ್ಕರಿಸಿದರು.

## ಕೊಪ್ಪ ತಾ. ಅ. ಮಂ. ಸಾಮಾನ್ಯ ಸಭೆ

ಕೊಪ್ಪ: ಇಲ್ಲಿನ ತಾ.ಅ.ಮಂಡಳಿಯ ಸಾಮಾನ್ಯ ಸಭೆ ಫೆ. ೧೦ರ ಮಧ್ಯಾಹ್ನ ನಡೆಯಲಿದೆ.

## ಹಗರಣಕ್ಕೆ ಮಂಗಳ

(೩ನೇ ಪುಟದಿಂದ)

ನ್ನು, ಈಗಲಾದರೂ ಕಾನೂನಿಗೆ ಬೆಲೆ ನೀಡಿ ನೇಮಕ ಮಾಡುವ ಮೂಲಕ ವ್ಯಕ್ತಿ ಪ್ರತಿಷ್ಠೆಗಿಂತ ಮಿಗಿಲಾದ ಸಂಸ್ಥೆಯ ಗೌರವ, ವಿದ್ಯಾರ್ಥಿಗಳ ಭವಿಷ್ಯವನ್ನು ಎತ್ತಿಹಿಡಿಯಬೇಕೆಂದು ಕೋರಿರುವ ಪೋಷಕರ ಕ್ರಿಯಾ ಸಮಿತಿ, ಕಡೆಗಾದರೂ ಎಚ್ಚೆತ್ತ ಇಲಾಖಾಧಿಕಾರಿಗಳಿಗೆ ಧನ್ಯವಾದ ಅರ್ಪಿಸಿದೆ.

ಬಹಳ ಸಮಯದಿಂದ ಹಗರಣಕ್ಕೆ ಬಲಿಯಾಗಿ, ಶೈಕ್ಷಣಿಕವಾಗಿ ಕುಸಿಯುತ್ತಿರುವ ಈ ಸಂಸ್ಥೆ ಇನ್ನಾದರೂ ತನ್ನ ಹಳೆಯ ಪ್ರತಿಷ್ಠೆಯನ್ನು ಮರಳಿ ಪಡೆಯುವತ್ತ ಹೆಜ್ಜೆ ಹಾಕುವುದೇ — ಎಂಬುದು ಎಲ್ಲರ ನಿರೀಕ್ಷೆಯಾಗಿದೆ.